ಶ್ರೀ ಹರಿದಾಸ ವಿಜಯಮಾಲಾ ನಾಲ್ಕನೆಯ ಮೊಗ್ಗೆ

# ಭಕ್ತ ಪುರಂದರದಾಸರು

---

ಲೇಖಕರು ಮತ್ತು ಪ್ರಕಾಶಕರು:
**ಹಂಡೆ ಗುರು ವೇದವ್ಯಾಸ ದಾಸರು,**
ಕೀರ್ತನಾಲಂಕಾರ, ಉಡುಪಿ.

ಮುದ್ರಕರು:
**ಮೆಜೆಸ್ಟಿಕ್ ಪ್ರೆಸ್, ಉಡುಪಿ.**

**1956**



**ಬೆಲೆ: ೧—೪—೦** [illegible]



## ಅರ್ಪಣೆ

ಶ್ರೀಮದ್ಭಾವಿಸಮೀರ ಶ್ರೀ ವಾದಿರಾಜ ಸ್ವಾಮಿಗಳ ಚರಣಾರ ವಿಂದಗಳ ಅನುಗ್ರಹದಿಂದ ಬರೆದು ಪ್ರಕಟಿಸಿದ 'ಭಕ್ತ ಪುರಂದರ ದಾಸರು' ಎಂಬ ಈ ಪೊಗ್ಗೆಯನ್ನು ಶ್ರೀಮದುತ್ತರಾದಿ ಮಠಾಧೀಶ ರಾಗಿ ದ್ವೈತದುಂದುಭಿಯನ್ನು ಪೊಳಗಿ ಕೀರ್ತಿವೆತ್ತ ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರ ಅಂತರ್ಗತನಾದ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಮೂಲ ರಾಮದೇವರ ಚರಣಾರವಿಂದಗಳಲ್ಲಿ ಅರ್ಪಿಸಿರುತ್ತೇನೆ.

**ಹಂಡೆ ಗುರು ವೇದವ್ಯಾಸ ದಾಸ.**

॥ ಶ್ರೀ ಕೃಷ್ಣಾಯ ನಮಃ ॥



## ನಾಂದಿ

ದ್ರೌಪದಿಯ ಭಯವ ಪರಿಹರಿಸಿದವನಾರೈ
ಆ ಪರೀಕ್ಷಿತನ ಭವಭಂಜನನಾರೈ
ತಾಪಸರಿಗಸುರರಿಂದ ಬಂದ ಪರಿಪರಿಯ
ಆಪತ್ತುಗಳನೆಲ್ಲ ಖಂಡಿಸಿದನಾರೈ
ಶ್ರೀಪತಿ ಹಯವದನನೊಬ್ಬನೆ ತನ್ನವರ
ತಾಪತ್ರಯವ ಬಿಡಿಸಿ ತಕ್ಕೈಸಿಕೊಂಬ

—ಶ್ರೀ ವಾದಿರಾಜ ಸ್ವಾಮಿಗಳು.

॥ ಶ್ರೀ ಪುರಂದರ ಗುರುಭ್ಯೋ ನಮಃ ॥



ಮನ್ಮನೋಽಭೀಷ್ಟ ವರದಮ್ ಸರ್ವಾಭೀಷ್ಟ ಫಲಪ್ರದಮ್ ।
ಪುರಂದರ ಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಮ್ ॥

# ಮುನ್ನುಡಿ

ಶ್ರುತಿ ಪುರಾಣಗಳಲ್ಲಿ ಜೀವನ ಶ್ರೇಯಸ್ಸಾಧನವು ನಿರೂಪಿತವಾಗಿದೆ. ಬಹುವಿಸ್ತೃತವಾಗಿರುವುದರಿಂದ ಅಲ್ಪಾಯುಗಳೂ ಅಲ್ಪಬುದ್ಧಿಶಕ್ತಿಯುಳ್ಳವರೂ ಆದ ಮಾನವರಿಗೆ ಈ ಬೃಹತ್ತಾದ ಶಬ್ದಸಮುದಾಯದಿಂದ ಸಾರವನ್ನು ಕಡೆದು ತೆಗೆಯುವುದು ದುಃಶ್ಯಕವೆಂದೇ ಹೇಳಬೇಕು, ಅಥವಾ ಅಸಾಧ್ಯವೆಂದರೂ ಎನ್ನಬಹುದು. ಇದಕ್ಕಾಗಿ ಸಜ್ಜನದಯಾಪಾರವಶ್ಯದಿಂದ ಶ್ರೀವೇದವ್ಯಾಸರಿಂದ ಬ್ರಹ್ಮಮೀಮಾಂಸಾ ಶಾಸ್ತ್ರವು ರಚಿಸಲ್ಪಟ್ಟಿತು. ಬ್ರಹ್ಮಮೀಮಾಂಸಾ ಶಾಸ್ತ್ರದ ರಚನೆಯಾದ ಒಳಿಕವೂ ಮಾನವರು ವೇದಗಳನ್ನು ಅರ್ಥಮಾಡಿಕೊಳ್ಳಲು ಅಶಕ್ತರಾಗಿಯೇ ಉಳಿದರು. ಆಗ ಶ್ರೀಮದಾಚಾರ್ಯರು ಅವತರಿಸಿ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಅನೇಕ ವ್ಯಾಖ್ಯಾನಗಳನ್ನು ಬರೆದು ಮಹದುಪಕಾರವನ್ನು ಮಾಡಿ ಸಜ್ಜನ ಸಮೂಹವನ್ನು ಸನ್ಮಾರ್ಗಾವಲಂಬಿಗಳನ್ನಾಗಿ ಮಾಡಿದರು. ಸೂತ್ರ ವ್ಯಾಖ್ಯಾನಗಳಿಗೆ ವಿವರಣರೂಪವಾಗಿ ಶ್ರೀಮತ್ತ್ರಿವಿಕ್ರಮ ಪಂಡಿತಾಚಾರ್ಯರು ಹಾಗೂ ಶ್ರೀಮಜ್ಜಯತೀರ್ಥ ಮುನಿಗಳೇ ಮೊದಲಾದ ಮಹಾತ್ಮರು ಉಪಗ್ರಂಥಗಳನ್ನು ಬರೆದು ಸಾಮಾನ್ಯ ಪಂಡಿತರಿಗೂ ತಮ್ಮ ಯೋಗ್ಯತಾನುಸಾರವಾಗಿ ವೇದಾರ್ಥನಿರ್ಣಯವಾಗುವಂತೆ ಮಾಡಿದರು. ಶ್ರೀಮದ್ಭಾವಿಸಮೀರ ವಾದಿರಾಜಯತಿವರರಂತೂ ಮಧ್ವಮತಾಬ್ಧಿಯನ್ನು ಮಥಿಸಿ ಯುಕ್ತಿಪುರಸ್ಸರವಾಗಿ ಮಧ್ವಾಭಿಪ್ರೇತ ತತ್ವಗಳನ್ನು ಜನಸಾಮಾನ್ಯರೂ ಸುಲಭವಾಗಿ ಅರಿಯುವಂತೆ ಮಾಡಿದರು.

ಶ್ರೀಮದ್ವಾದಿರಾಜರ ಸಮಕಾಲೀನರಾದ ಪುರಂದರದಾಸವರ್ಯರು ಸಂಸ್ಕೃತಾನಭಿಜ್ಞಜನತೆಯಲ್ಲೂ ತತ್ವಮಾರ್ಗವನ್ನು ಪ್ರದರ್ಶನಮಾಡುವ ಮೂಲಕ ವೈದಿಕ ಜ್ಞಾನವನ್ನು ಪ್ರತಿಷ್ಠಿಸಿದವರಲ್ಲಿ ಅಗ್ರಣಿಗಳು ಎಂದು ನಿಸ್ಸಂಶಯವಾಗಿ ಹೇಳಬಹುದು. ವೇದವ್ಯಾಸರು ವೇದಾರ್ಥಗ್ರಹಣ ಅಸಮರ್ಥ ಜನತೆಗೂ ತತ್ವಮಾರ್ಗದ ದರ್ಶನವಾಗಲಿ ಎಂಬ ಉದ್ದೇಶದಿಂದ ಇತಿಹಾಸ ಪುರಾಣಗಳನ್ನು ರಚಿಸಿದ ಮಾರ್ಗವನ್ನು ಅನುಸರಿಸಿ

ಪುರಂದರದಾಸರು ಪ್ರಾಕೃತ ಭಾಷೆಯಲ್ಲೇ ಅನೇಕ ಸಹಸ್ರ ಗ್ರಂಥಗಳನ್ನು ಬರೆದು ವಿಷ್ಣುಭಕ್ತಿಯು ಯೋಗ್ಯ ಜನರ ಮನದಲ್ಲೆಲ್ಲಾ ಅಭಿವ್ಯಕ್ತವಾಗುವಂತೆ ಮಾಡಿ ಭಕ್ತಿಮಾರ್ಗ ಪ್ರದರ್ಶನಾಚಾರ್ಯರೆನಿಸಿದರು.

ಈ ಮಹಾತ್ಮರ ಗ್ರಂಥಗಳೆಲ್ಲಾ ಬಹಳ ಸುಲಭವಾದ ಭಾಷೆಯಲ್ಲಿ ಬರೆಯಲ್ಪಟ್ಟದ್ದು ಮನಸ್ಸಿಗೆ ಅತ್ಯಂತ ಒಪ್ಪುವ ದೃಷ್ಟಾಂತಗಳಿಂದ ಕೂಡಿ ಸುಲಭ ಜ್ಞೇಯವಾಗಿವೆ. ಈ ಗ್ರಂಥಗಳ ಸದುಪಯೋಗವನ್ನು ಮಾಡಿಕೊಳ್ಳುವುದು ಸ್ವಹಿತೇಚ್ಛುವಾದ ಪ್ರತಿಯೊಬ್ಬನ ಕರ್ತವ್ಯವಾಗಿದೆ.

ನಮ್ಮ ಉಡುಪಿಯಲ್ಲಿ ಅನೇಕ ವರ್ಷಗಳಿಂದ ಹರಿದಾಸ ಸಾಹಿತ್ಯ ಪ್ರಚಾರಕ್ಕೋಸ್ಕರ ಶ್ರಮಿಸುತ್ತಾ ಬಂದಿರುವ ಶ್ರೀ। ವೇ। ಹಂಡೆ ಶ್ರೀಪಾದದಾಸರ ಸುಪುತ್ರ ಶ್ರೀ। ವೇ। ಹಂಡೆ ಗುರುವೇದವ್ಯಾಸ ಆಚಾರ್ಯರು ತಮ್ಮ ಪಿತೃಗಳ ಮಾರ್ಗವನ್ನು ಅನುಸರಿಸಿ ಸಂಸ್ಕೃತ ಭಾಷಾ ಪರಿಚಯವನ್ನು ಸಾಕಷ್ಟು ಸಂಪಾದಿಸಿಕೊಂಡು, ದಾಸ ಸಾಹಿತ್ಯದಲ್ಲಿ ಗಾಢವಾದ ವಿಚಾರವನ್ನು ಮಾಡಿ ಅನೇಕ ವರ್ಷಗಳಿಂದ ಕರ್ನಾಟಕದ ವಿವಿಧ ಭಾಗಗಳಲ್ಲಿ ಸಂಚರಿಸುತ್ತಾ ದಾಸಸಾಹಿತ್ಯ ಸೇವೆಯನ್ನು ಮಾಡುತ್ತಿರುವುದು ಸರ್ವರಿಗೂ ವಿದಿತವಾಗಿದೆ.

ಇವರು ಅಷ್ಟರಲ್ಲೇ ತೃಪ್ತಿಪಡದೆ ಪುರಂದರದಾಸರ ಕೃತಿಗಳಲ್ಲಿ ಸುಲಭವಾಗಿ ತಿಳಿಯಲು ಸಾಧ್ಯವಾದ ಕೃತಿಗಳನ್ನು ಆರಿಸಿಕೊಂಡು ಅವುಗಳು ಪ್ರತಿ ಮನೆಯಲ್ಲೂ ಬಳಕೆಗೆ ಬರಬೇಕೆಂಬ ಸದುದ್ದೇಶದಿಂದ ಆ ಕೃತಿಗಳನ್ನೊಳಗೊಂಡ ದಾಸರ ಜೀವನ ಚರಿತ್ರೆಯನ್ನು ತಾವೇ ಅನೇಕ ಆಧಾರ ಗ್ರಂಥಗಳ ಸಹಾಯದಿಂದ ಶ್ರಮವಹಿಸಿ ಬರೆದು ಜನತೆಯ ಮುಂದಿಡುತ್ತಿದ್ದಾರೆ. ಇವರ ಶ್ರಮವು ಸಫಲವಾಗಿ ಜನತೆಯು ಇದರ ಪ್ರಯೋಜನವನ್ನು ತಪ್ಪದೆ ಪಡೆಯಲಿ ಎಂದು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯಾಂತರ್ಗತ ಶ್ರೀಕೃಷ್ಣ ವೇದವ್ಯಾಸರನ್ನು ಸಂಪ್ರಾರ್ಥಿಸುತ್ತೇವೆ.

**ಇತ್ಯನೇಕ ಶ್ರೀಮನ್ನಾರಾಯಣ ಸ್ಮರಣೆಗಳು**

**ಉಡುಪಿ,**
ತಾ. 30—10-56.

**ಶ್ರೀ ವಿಬುಧೇಶತೀರ್ಥ ಶ್ರೀಪಾದಂಗಳವರು**
**ಶ್ರೀ ಅದಮಾರು ಮಠ, ಉಡುಪಿ.**

# ಪ್ರಶಸ್ತಿ ಪತ್ರ

ಶ್ರೀ ಪುರಂದರ ದಾಸರು ಬಹು ವಿಸ್ತೃತಗಳಾದ ಅನೇಕಗ್ರಂಥಗಳನ್ನು ಮಾಡಿರುವರು. ಈ ಗ್ರಂಥಗಳು ಶ್ರೀಮದಾಚಾರ್ಯರ ಸಿದ್ಧಾಂತದ ಗೂಢಾರ್ಥಗಳನ್ನು ಚೆನ್ನಾಗಿ ತೋರ್ಪಡಿಸುವುವು. ಸಂಸ್ಕೃತಾನಭಿಜ್ಞರಿಗೂ ಮೋಕ್ಷಾದಿಪುರುಷಾರ್ಥಗಳು ಲಭಿಸಬೇಕೆಂಬ ಉದ್ದೇಶದಿಂದ ಈ ಗ್ರಂಥ ಗಳು ಆಚಾರ್ಯರ ಸಿದ್ಧಾಂತವಾಕ್ಯಗಳ ಸಾರರೂಪವಾಗಿ ರಚಿಸಲ್ಪಟ್ಟವೆ. ಶ್ರೀ ಪುರಂದರ ದಾಸರ ಗ್ರಂಥಗಳ ಸಾರವನ್ನು ತಮ್ಮ ಶಕ್ತ್ಯನುಸಾರವಾಗಿ ಹೀರಿ ಅಲ್ಲಲ್ಲಿ ಶ್ರೀ ಪುರಂದರ ದಾಸರ ಪದ್ಯಗಳನ್ನು ಸಂದರ್ಭೋಚಿತವಾಗಿ ಉದಾಹರಿಸುತ್ತಾ ಈ ಗ್ರಂಥಕರ್ತರು ಈ ಗ್ರಂಥವನ್ನು ರಚಿಸಿರುವರು. ಪುರಂದರ ದಾಸರ ಮಹಾತ್ಮ್ಯವನ್ನು ತಿಳಿಯದಿದ್ದರೆ 'ಕಿಂತೂತ್ತಮಶ್ಲೋಕ ಶಿಖಾಮಣೀನಾಂ ಮನೋವಿಶುದ್ಧ್ಯೈ ಚರಿತಾನುವಾದಃ' ಎಂಬ ವಾಕ್ಯ ದಂತೆ ಮನಃ ಶುದ್ಧಿಯುಂಟಾಗದು, ಮನಃ ಶುದ್ಧಿಯುಂಟಾಗದೆ ಪುರಂದರ ದಾಸರಲ್ಲಿ ಭಕ್ತಿ ಹುಟ್ಟದು, ಪುರಂದರ ದಾಸರಲ್ಲಿ ಭಕ್ತಿಯುತ್ಪನ್ನವಾಗದೆ ಪುರಂದರ ದಾಸರ ಉಪದೇಶವಾಕ್ಯಗಳಲ್ಲಿ ಶ್ರದ್ಧೆಯುಂಟಾಗದು. ಆದಕಾರಣ ವೇ|| ಹಂಡೆ ಶ್ರೀಪಾದ ದಾಸರ ಪುತ್ರ, ವೇ|| ಹಂಡೆ ಗುರುವೇದವ್ಯಾಸ ದಾಸರು, ಶ್ರೀ ಹರಿಚರಿತೆಯನ್ನು ತಿಳಿದಂತೆ ಸಜ್ಜನರು ಶ್ರೀ ಹರಿಭಕ್ತರ ಚರಿತ್ರೆಯನ್ನೂ ತಿಳಿದು, ಹರಿಭಕ್ತರ ಉಪದೇಶದಲ್ಲಿ ಶ್ರದ್ಧೆಯಿರಿಸಿ ಅದ ರಂತೆ ನಡೆದು ಐಹಿಕಾಮುಷ್ಮಿಕ ಪುರುಷಾರ್ಥಗಳನ್ನು ಹೊಂದಲಿ ಎಂಬ ಸದುದ್ದೇಶದಿಂದ ಹರಿಭಕ್ತರಾದ ಶ್ರೀ ಪುರಂದರದಾಸರ ಚರಿತ್ರೆಯನ್ನು ಆಪಾಮರರೂ ಅರಿತು ಹರಿಗುರುಗಳ ಕೃಪೆಗೆ ಪಾತ್ರರಾಗಲೆಂದು ಬರೆ ದುದು ಪ್ರಶಂಸನೀಯವಾಗಿದೆ. ನಮ್ಮ ಈ ದಾಸರಿಗೆ ಶ್ರೀ ಹರಿವಾಯುಗಳು ದೀರ್ಘಾಯುಷ್ಯತ್ಸುಗುಣ ಸುಪುತ್ರಾದ್ಯೈಶ್ವರ್ಯವನ್ನು ದಯಪಾಲಿಸಿ ಈ ಗ್ರಂಥವು ಸಜ್ಜನಾದರಣೀಯವಾಗಲೆಂದು ರುಕ್ಮಿಣೀ ಸತ್ಯಭಾಮಾಸಹಿತ ಶ್ರೀ ಗೋಪಾಲ ಕೃಷ್ಣನನ್ನು ಪ್ರಾರ್ಥಿಸಿ ದಾಸರನ್ನು ಹರಸುತ್ತೇನೆ.

ಉಡುಪಿ,
ತಾ. 30—10—56.

**ಎ. ನಾರಾಯಣ ತಂತ್ರಿ,** ವಿದ್ವಾನ್, ಶಿರೋಮಣಿ
ಉಡುಪಿ ಸಂಸ್ಕೃತ ಮಹಾ ಪಾಠಶಾಲಾ
ವೇದಾಂತ ಪ್ರಧಾನ ಪಂಡಿತರು.

# ಲೇಖಕನ ವಿಜ್ಞಾಪನೆಯು

ಶ್ರೀ ಪುರಂದರ ದಾಸರ ಚರಿತ್ರೆಯನ್ನು ಈ ಮೊದಲೇ ಅನೇಕ ವಿದ್ವಾಂಸರು ಬರೆದು ಪ್ರಕಟಿಸಿರುವರು. ಈಗ ಕೆಲವು ವರ್ಷಗಳ ಹಿಂದೆ ನನ್ನ ವೇ|| ತೀರ್ಥ ರೂಪರೇ ಬರೆದು ಪ್ರಕಟಿಸಿರುವರಾದರೂ ನನ್ನ ಜನ್ಮ ಸಾರ್ಥಕಕ್ಕೂ, ನಮ್ಮ ಮಾಲೆಯಿಂದ ಪುರಂದರ ದಾಸರ ಚರಿತ್ರೆಯು ಪ್ರಕಟಿಸಲೇ ಬೇಕಾದುದರಿಂದಲೂ ಹಿರಿಯರಾಜ್ಞೆಯಂತೆ ಬರೆದು ಪ್ರಕಟಿಸಿರುವೆನು. ಬಲ್ಲವರು ದೋಷಗಳನ್ನು ಬಿಟ್ಟು ಗುಣಗಳನ್ನಾರಿಸಿ ಆದರಿಸುವರೆಂದು ನಂಬಿದ್ದೇನೆ.

ಈ ಕೃತಿಯು ಪ್ರಕಟವಾಗಲು ಈ ಮೊದಲು ನಾನು ಬರೆದು ಪ್ರಕಟಿಸಿದ "ಭಕ್ತ ರಾಘವೇಂದ್ರರು" ಎಂಬ ಮೊಗ್ಗೆಯನ್ನು ತಮ್ಮ ಕರಕಮಲಗಳಿಂದ ಉಡುಪಿ ಶ್ರೀಕೃಷ್ಣನ ಸನ್ನಿಧಿಯಲ್ಲೇ ಉದ್ಘಾಟಿಸಿ "ಇನ್ನೂ ನಿನ್ನಿಂದ ಇಂತಹ ಅನೇಕ ಉತ್ತಮ ಗ್ರಂಥಗಳು ಬರೆಯಲ್ಪಟ್ಟು ಪ್ರಕಟವಾಗಲಿ" ಎಂದು ತುಂಬು ಹೃದಯದಿಂದ ಹರಸಿದ ಉಡುಪಿ ಅಷ್ಟ ಮಠಾಧೀಶರಲ್ಲೊಬ್ಬರೂ ಪ್ರಕೃತ ಪರ್ಯಾಯ ಪೀಠಸ್ಥರೂ ಆಗಿರುವ ಶ್ರೀ ಅದಮಾರು ಮಠಾಧೀಶರಾಗಿರುವ ಶ್ರೀ ಮಧ್ವಿಬುಧೇಶ ತೀರ್ಥ ಶ್ರೀಪಾದಂಗಳವರ ಆಶೀರ್ವಾದವೇ ಕಾರಣ, ಅಲ್ಲದೆ ಮಹತ್ಪದವೀಧರರಾದರೂ ಈ ಬಡವನನ್ನು ಮರೆಯದೆ ಶ್ರೀ ಶ್ರೀಗಳವರೇ ಈ ಗ್ರಂಥಕ್ಕೂ ಮುನ್ನುಡಿಯನ್ನು ಬರೆದಿರುವರು. ಶ್ರೀ ಶ್ರೀ ಗಳವರ ಚರಣ ಕಮಲಗಳಿಗೆ ನನ್ನ ಅನಂತಾನಂತ ಪ್ರಣಾಮಗಳನ್ನರ್ಪಿಸುತ್ತೇನೆ.

ನಮ್ಮ ಪತ್ರಿಕೆಗೆ ಸದಾ ಬೆಂಬಲವನ್ನೀಯುತ್ತಿರುವ ಮಠಾಧೀಶರುಗಳೆಲ್ಲರಿಗೂ ನನ್ನ ಅನಂತಾನಂತ ಪ್ರಣಾಮಗಳು.

ಅಲ್ಲದೆ ಪ್ರೋತ್ಸಾಹ ನೀಡುತ್ತಿರುವ ಸಕಲರಿಗೂ ನನ್ನ ವಂದನೆಗಳು.

ಪ್ರಶಸ್ತಿ ಪತ್ರವನ್ನು ದಯಪಾಲಿಸಿದ ವೇ|| ನಾರಾಯಣ ತಂತ್ರಿಗಳು—ವಿದ್ವಾನ್ ಶಿರೋಮಣಿ, ಉಡುಪಿ ಸಂಸ್ಕೃತ ಮಹಾ ಪಾಠಶಾಲಾ ವೇದಾಂತ ಪ್ರಧಾನ ಪಂಡಿತರು ಇವರಿಗೂ ನನ್ನ ಅನಂತಾನಂತ ಪ್ರಣಾಮಗಳು.

ನನ್ನ ಮೇಲಿನ ಪ್ರೇಮದಿಂದ ಪ್ರತಿಯೊಂದು ಪುಸ್ತಕವನ್ನೂ ಸುಂದರವಾಗಿ ಸಕಾಲದಲ್ಲಿ ಮುದ್ರಿಸಿಕೊಟ್ಟ ಉಡುಪಿ ಮೆಜಿಸ್ಟಿಕ್ ಪ್ರೆಸ್ಸಿನ ಮಾಲಿಕರಿಗೂ ಅಲ್ಲದೆ ಅವರ ಸಹಾಯಕರಿಗೂ ನನ್ನ ಪ್ರೀತಿಯ ಧನ್ಯವಾದಗಳು. ನನ್ನ ಈ ಉದ್ಯಮದಲ್ಲಿ ನನಗೆ ತುಂಬಾ ನೆರವಾಗುತ್ತಿರುವ ನನ್ನ ಶಿಷ್ಯ ಉಡುಪಿ ಕೆರೆಮಠ ಹರಿದಾಸ ಉಪಾಧ್ಯಾಯನಿಗೆ ನನ್ನ ಆಶೀರ್ವಾದಗಳು.

**ನರಕಚತುರ್ದಶಿ**
**1—11—56**

**ಹಂಡೆ ಗುರು ವೇದವ್ಯಾಸ ದಾಸ.**

# ಪೂರ್ವ ಪೀಠಿಕೆಯು

ದೇವತೆಗಳು ಮಾಡಿದ ಉಪಕಾರವನ್ನು ಮರೆಯುವ ಕೃತಘ್ನರಲ್ಲ. ಆದುದರಿಂದ ಭಾರತೀಯರಾದ ನಮ್ಮ ಪೂರ್ವಜರಿಂದ ಹವ್ಯಕವ್ಯಾದಿಗಳಲ್ಲಿ ಪೂಜಿಸಿಕೊಂಡ ಉಪಕಾರಸ್ಮರಣೆಯಿಂದ ಅವರು ಅಂತಹ ಭಾರತೀಯರ ಸದ್ವಂಶ ಪರಂಪರೆಯಲ್ಲಿ ಬರಬರುತ್ತಾ ಜನನಕ್ಕೆ ಬಂದಿರುವರು. ಕಾಲ ದೇಶಾನುಸಾರವಾಗಿ ಸಕಲವಿಧದಲ್ಲೂ ಭಗವತ್ಪೂಜೆಯನ್ನು ಮಾಡಿ ಶ್ರೀಹರಿಯನ್ನು ಮೆಚ್ಚಿಸಿ ಶ್ರೀಹರಿಯ ಅನುಗ್ರಹವನ್ನು ಪಡೆಯಲು ನಮ್ಮವರು ಅಸಮರ್ಥರಾಗಿರುವುದನ್ನು ಕಂಡು ನಮ್ಮ ಉದ್ಧಾರದ ಮಾರ್ಗವೇನೆಂದು ಯೋಚಿಸಿ ದೇವತೆಗಳು ಶ್ರೀಹರಿಯನ್ನು ಹೀಗೆ ಪ್ರಾರ್ಥಿಸಿದರು.

"ಶ್ರೀಹರೇ! ಕಲಿಕಲ್ಮಷಚಿತ್ತರಾಗಿ ಭರತಭೂಮಿಯಲ್ಲಿ ಜನ್ಮತಳೆದ ಮಾನವರು ಧ್ಯಾನ, ಯಜನ ಯಜ್ಞಾದಿಗಳನ್ನೂ, ನಿನ್ನ ಸೇವೆಯನ್ನೂ ಮಾಡದೆ ತಮ್ಮ ಜನ್ಮವನ್ನು ನಿರರ್ಥಕಗೊಳಿಸುತ್ತಿರುವರು—ಅವರ ಉದ್ಧಾರಕ್ಕೆ ಸುಲಭವಾದ ಮಾರ್ಗವಾವುದೆಂದು ನೀನು ತಿಳಿಸಿ ಅನುಗ್ರಹಿಸಬೇಕು" ಈ ಪ್ರಕಾರ ಪ್ರಾರ್ಥಿಸಿದ ಸುರರ ಪ್ರಾರ್ಥನೆಯನ್ನು ಮನ್ನಿಸಿದ ಶ್ರೀಮನ್ನಾರಾಯಣ ದೇವರು ಸಕಲ ಅನಿಮಿಷರ ಮಧ್ಯದಲ್ಲಿ ನಾರದರ ಮೇಲೆ ತನ್ನ ಕರುಣಾಕಟಾಕ್ಷವನ್ನು ಬೀರಿ ಬಳಿಗೆ ಕರೆದು,

"ನಾರದ! ಕಲಿಯುಗದಲ್ಲಿ ಸುಜೀವಿಗಳಾದರೂ ಕಾಲವಶದಿಂದ ಸತ್ಸಾಧನೆಯಲ್ಲಿ ದುರ್ಬಲರಾಗಿರುವ ಮೋಕ್ಷ ಯೋಗ್ಯಜೀವರ ಉದ್ಧಾರಕ್ಕೆ ನೀನು ಮಾರ್ಗದರ್ಶಕನಾಗಬೇಕೆ"ಂದು ಆಜ್ಞೆಯನ್ನು ಇತ್ತರು.

ನಾರದರು 'ಮಹದಾಜ್ಞೆ!' ಎಂದು, ಸ್ವಾಮಿಗಭಿನಂದಿಸಿ ಭಗವದಾಜ್ಞೆಯನ್ನು ಶಿರಸಾವಹಿಸಿ ತಾವು ಈ ಪುಣ್ಯ ಭೂಮಿಯಲ್ಲಿ ಅವತರಿಸಲು ನಿಶ್ಚೈಸಿದರು.

ನಾರದರಿಗಿಂತಲೂ ಉತ್ತಮರಾದ ಅನೇಕ ದೇವತೆಗಳಿದ್ದರೂ ಪುರುಷೋತ್ತಮನು ಈ ಕಾರ್ಯದಲ್ಲಿ ನಾರದರನ್ನೇ ನಿಯೋಜಿಸಿದುದೇಕೆ? ಎಂಬುವ ವಿಷಯದಲ್ಲಿ ಶ್ರೀಮದ್ಭಗವದ್ಗೀತೆ ಯಲ್ಲಿ ಶ್ರೀಕೃಷ್ಣನು—

**ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತ ಮೇವವಾ ।**
**ತತ್ತ ದೇವಾವ ಗಚ್ಛತ್ವಂ ಮಮತೇಜೋಂಶ ಸಂಭವಮ್ ॥ ೧೦।೪೧ ॥**

ಎಂಬುದಾಗಿ ವಿಭೂತಿಯೋಗದಲ್ಲಿ ತನ್ನ ವಿಭೂತಿರೂಪವನ್ನು ವಿವರಿಸುತ್ತಾ ಉತ್ತಮಾಧಿಕಾರಿಯಾದ ಪ್ರಿಯಶಿಷ್ಯನಾದ ಅರ್ಜುನನಿಗೆ ಉಪದೇಶಿಸಿರುವನು. ಈ ಶ್ಲೋಕದ ತಾತ್ಪರ್ಯವೇನೆಂದರೆ—'ಯಾವ ಯಾವ ವಸ್ತುವು ತನ್ನ ಜಾತಿಯಲ್ಲಿ ಶ್ರೇಷ್ಠವಾದುದೋ ಸಂಪತ್ತಿನಿಂದ ಕೂಡಿರುವುದೋ ಮತ್ತು ಅಭಿವೃದ್ಧಿಯುಳ್ಳದೋ ಆಯಾಯವಸ್ತುವು ನನ್ನ ಪ್ರಕಾಶರೂಪವಾದ ಅಂಶದಿಂದ ಕೂಡಿಕೊಂಡಿರುವುದನ್ನಾಗಿ ನೀನು ತಿಳಿದುಕೊ,' ಎಂದು. ನಾರದರ ವಾಕ್ಕಿನಲ್ಲಿ ತನ್ನ ವಿಭೂತಿರೂಪವಿರುವುದರಿಂದ ನಾರದರಿಗೆ ಕಲಿಯುಗದಲ್ಲಿ ಸುಜನರುದ್ಧಾರಾರ್ಥವಾಗಿ ಅವತರಿಸಲು ಆಜ್ಞೆಯುನ್ನಿತ್ತನು.

ನಾರದರ ಮಾತಿನಲ್ಲಿ ಪರಮಾತ್ಮನ ವಿಭೂತಿಮತ್ಸತ್ವವಿರುವುದೆಂಬುದಕ್ಕೆ ಸಾತ್ವಿಕರ ಮಾತಂತಿರಲಿ, ಅಸುರರೂ, ದೈತ್ಯರೂ, ದಾನವರೂ, ಮಹಾದುಷ್ಟರಾದವರೂ ನಾರದರ ಮಾತಿಗೆಮನಸೋತರೆಂಬುದು–ಅಂದರೆ, ಪುರಾಣಗಳಲ್ಲಿ ಕಂಡುಬರುವ ಅನೇಕ ಕಥೆಗಳು ನಿದರ್ಶನಗಳಾಗಿರುವುವು.

ನಾರದರ ಮುಖದಿಂದ ಬಂದ ಮಾತುಗಳೆಂದರೆ ಮನಸ್ಸಿನ ಮೇಲೆ ಪ್ರತಿಬಿಂಬಿಸಿ ಪರಿಣಾಮಕಾರಿಯಾಗುವಂಥವುಗಳು. ಇನ್ನೊಂದು ಕಾರಣ–ಗೀತೆಯಲ್ಲೇ ವಿಭೂತಿಯೋಗದಲ್ಲೇ 'ದೇವರ್ಷೀಣಾಂಚ ನಾರದಃ'= ದೇವರ್ಷಿಗಳಲ್ಲಿ ಶ್ರೇಷ್ಠನಾದ ನಾರದನಿಗೆನಿಯಾಮಕನಾಗಿ ಇತರ ದೇವರ್ಷಿಗಳಲ್ಲಿ ಈತನಿಗೆ ಶ್ರೇಷ್ಠತ್ವವನ್ನು ಕೊಡುತ್ತ ಜ್ಞಾನವನ್ನು ಕೊಡುವವನು. ('ನಾರಂ ಜ್ಞಾನಂ ದದಾತಿ ಇತಿ ನಾರದಃ' ಎಂಬುದೇ ಇದಕ್ಕೆ ಆಧಾರ.) ಆದುದರಿಂದ ನಾರದನೆಂದು ಹೆಸರುಳ್ಳವನಾಗಿ ನಾರದನಲ್ಲಿ ಇರುತ್ತೇನೆ' ಎಂದು ಪರಮಾತ್ಮನು ಹೇಳಿರುವುದರಿಂದ ಜ್ಞಾನೋದಯವಾಗಲು ನಾರದರ ಮಾತಿನಲ್ಲಿ ವಿಶ್ವಾಸವಿಟ್ಟು ಸಜ್ಜನರು ತನ್ನ ಅನುಗ್ರಹಕ್ಕೆ ಪಾತ್ರರಾಗಲಿ ಎಂಬ ಸಂಕಲ್ಪದಿಂದ ನಾರದರನ್ನೇ ಪ್ರೇರೇಪಿಸಿದನು. ('ನರಾಣಾಂ ಅಪೇ

ಕ್ಷಿತಂ ನಾರಂ-ತದ್ದದಾತೀ(ತಿ ನಾರದಃ' ಎಂಬ ಅರ್ಥವೂ ನಾರದ ಎಂಬ ಶಬ್ದಕ್ಕೆ ವ್ಯುತ್ಪತ್ತಿ ಉಳ್ಳವರು ಹೇಳುತ್ತಾರೆ.)

ಇಂತು ಭಗವದಾಜ್ಞೆಯಂತೆ ನಾರದರು ಭಗವನ್ನಾಮ ಸಂಕೀರ್ತನೆಯೇ ಕಲಿಯುಗದಲ್ಲಿ ಪರಮಾತ್ಮನ ಅನುಗ್ರಹಕ್ಕೆ ಸುಲಭಮಾರ್ಗವೆಂದು ಮಾರ್ಗದರ್ಶಕರಾಗಿರುವ ಶ್ರೀ ಅಚಲಾನಂದರು, ಶ್ರೀನರಹರಿ ತೀರ್ಥರು, ಶ್ರೀಪಾದ ರಾಜರು, ಶ್ರೀವ್ಯಾಸರಾಯರೇ ಮೊದಲಾದ ಮಹನೀಯರಿಂದ ಪುನರುಜ್ಜೀವನ ಹೊಂದಿದ ಹರಿಭಕ್ತಿ ಪಂಥದ ಸಂಪೂರ್ಣ ಉದ್ಧಾರ ಕಾರ್ಯದ ಸಂಕಲ್ಪವುಳ್ಳವರಾಗಿ **ಶ್ರೀ ಪುರಂದರ ದಾಸರು** ಎಂಬ ಅಭಿಧಾನದಿಂದ ಅವತರಿಸಿದರು.

ನಾರದರೇ ವಾಯುದೇವರ ಆವೇಶದಿಂದ ಯುಕ್ತರಾದ ಪುರಂದರ ದಾಸರೆಂಬುವ ವಿಚಾರದಲ್ಲಿ ಈ ಕೆಳಕಂಡ ಗರುಡ ಪುರಾಣ ವಚನವು ಪ್ರಮಾಣವಾಗಿ ಇರುವುದು.

'ನಾರದೋ ವಿಷ್ಣು ಸೇವಾರ್ಥಂ ವಾಯ್ವಾವೇಶಯುತೋಽಜನಿ||
ಪುರಂದರ ಇತಿಖ್ಯಾತಃ ತತ್ವಮಾರ್ಗಂ ಪ್ರದರ್ಶಯನ್' ||

ಶ್ರೀಹರಿದಾಸ ಶ್ರೇಷ್ಠರಾದ ಇವರ ಗುಣಕಥನವು ಸರ್ವಶ್ರೇಯಃಸಾಧನವೆಂಬುದು ಅಕ್ಷರಶಃ ಸತ್ಯ .

ಶ್ರೀ ವಿಜಯ ದಾಸರು ಶ್ರೀ ಪುರಂದರ ದಾಸರನ್ನು ಭಕ್ತ್ಯನ್ಮಾದದಿಂದ ಹೀಗೆ ಸ್ತುತಿಸಿದ್ದಾರೆ –

**ಪೂರ್ವಿ ರಾಗ, ತಾಳ ಮಟ್ಟೆ**

ಬ್ಯಾಸರಾದೇ ಭಜೀಸೀರೋ । ದಾಸರಾಯರಾಯರಾ ।
ಪುರಂದರ ದಾಸರಾಯರಾ || ಪ ||
ಶ್ರೀಶ ನಿಮ್ಮನು । ದಾಸೀನ ಮಾಡದೆ
ಪೋಷಿಸುವ ಸಂ । ತೋಷದಿಂದ || ಅ || ಪ ||
ಪುರಂದರ ಘಡದ ಒಳಗೆ । ಹಿರಿಯ ಸಾಹುಕಾರನೆನಿಸಿ

ಪರಿ ಪರಿ ಸೌಖ್ಯಗಳ ಸುರಿಸುತ್ತ । ಇರುತಿರಲು ನರಹರಿ ।
ತ್ವರಿತದಿಂ ಬ್ರಾಹ್ಮಣ ನಾಗುತ್ತ । ಕಾರುಣ್ಯದಿಂದು ।
ದ್ಧರಿಸಲೋಸುಗ ಮನೆಗೆ ಪೋಗುತ್ತ । ಯಜಮಾನ ಕಂಡು ।
ಹೊರಗೆ ಹಾಕಲು । ಮರು ದಿವಸ ಮತ್ಹೋಗಿನಿಂತ ॥ ೧ ॥

ಬಾರಿ ಬಾರಿಗೆ ಸಾಹುಕಾರನ । ಮೋರೆಗ್ಹತ್ತಿ ಮೇರೆಯಿಲ್ಲದೆ ।
ಆರು ತಿಂಗಳು ಬೆನ್ನ ಬೀಳುತ್ತಾ । ನಾಯಕರು ಈತನ—
ದಾರು ಬಿಡುತಾರೆಂದು ಬೈಯುತ್ತಾ । ಬ್ಯಾಸತ್ತು ಎರಡು ।
ಹೇರು ರೊಕ್ಕ ಮುಂದೆ ಸುರಿಯುತ್ತ । ಇದರೊಳೊಂದು ।
ಡ್ಡಾರಿಸೀಕೋ ಎಂದು ಪೇಳಲು। ನಾರಾಯಣ ಬಿಟ್ಹೋದನಗುತ॥ ೨॥

ಹಿತ್ತಲಾ ಬಾಗಿಲಲಿ ಹೋಗಿ । ಮತ್ತೆ ಆತನ ಮಡದಿಗಾಗಿ ।
ಹತ್ತಿದನು ತಾ ರೊಕ್ಕ ತಾರೆನುತ । ತಾ ಮಗನ ಮುಂಜ್ಯೆಂ ।
ದತ್ಯಧಿಕದಿಂ ಬಾಯತೆಗೆಯುತ್ತ । ಆ ಪ್ರಾಣಿ ನುಡಿದಳು ।
ಎತ್ತಣ ದ್ರವ್ಯವು ತನಗೆನುತ । ನಿನ ಮೂಗಿನಾಗಿನ ।
ಮುತ್ತಿನ ಮೂಗುತಿಯತಾರೆನೆ । ಉತ್ತಮಳ್ಹೆಗದಿತ್ತಳ್ತ್ವರಿತ ॥ ೩ ॥

ಜೋಕೆಯಿಂದಲಿ ಮೂಗುತ್ಯೊಯ್ದು । ಆಕೆ ಗಂಡನ ಕಣ್ಣಿಗೇತಾ
ಹಾಕಿದಾನು ಪಾಕಿ ಕೊಡುಎನುತ । ಅದಕಂಡು ಇದು ನ ।
ಮ್ಮಾಕೆದೆಂದು ಆತ ನುಡಿಯುತ್ತ । ಸೇವಕರು ಅಂಥಾ ।
ದ್ದ್ಯಾಕೆ ಇರಬಾರದು ಎನ್ನುತ್ತ । ಬೆಲೆ ಪೇಳು ಎನ್ನಲು ।
ನಾಕು ನೂರು ಪಾಕಿಕೊಡು ಎಂ । ದ್ಹಾಕಿ ಬಾರದೆತಿರುಗಿಹೋದ ॥೪॥

ತಿರುಗಿ ಬ್ರಾಹ್ಮಣ ಬಾರದಿರಲು । ಕರೆದು ತನ್ನ ಹೆಂಡತೀಯ ।
ಬರಿಯ ನಾಸಿಕವನ್ನೆ ಕಂಡನು । ಆಭರಣ ವೆಲ್ಲ್ಯನೆ।
ಮುರಿದಿದೆಂದು ಪೇಳಿದಳು ಇನ್ನು । ತೋರಾದೆ ಇದ್ದರೆ
ಅರಿವೆ ನಿನ್ನ ಜೀವವೆಂದನು । ವಿಷಕೊಂಬೆನೆಂದು ।
ಕರದಿ ಬಟ್ಟಲ ಧರಿಸಲಾಕ್ಷಣ । ತ್ವರದಿ ನರಹರಿ ಅದರೊಳಿತ್ತನು ॥೫॥

ಹರುಷದಿಂದಲಿ ಒಡವೆ ವೈದು । ಪುರುಷನ ಕೈಯಲ್ಲಿ ಕೊಡಲು ।
ತರಿಸೆ ತನ್ನಲ್ಲಿದ್ದ (ಒಡವೆಯು) ಭರಣೀಯು । ಕಾಣದೆ ಇರಲು ।
ಬೆರಳ ಕಚ್ಚಿ ಕೇಳ್ದ ಮಡದೀಯು । ನಿಜ ಪೇಳು ಎನ್ನಲು ।
ಅರಸಿ ನುಡಿದಳು ಕೊಟ್ಟ ಸುದ್ದೀಯು । ಅಭಿಮಾನಕಂಜಿ ।
ಅರೆದು ವಿಷವನು ಕುಡಿವೆನೆಂಬೆನೆ । ಶಿರಿರಮಣ
ಕೊಟ್ಟದ್ದು ಖರೆಯ ॥ ೬ ॥

ದೇವರಾಯನು ತನ್ನ ಮನದಾ । ಭಾವವನ್ನು ತಿಳಿಯಲೋಸುಗ
ಕೇವಲ ಬ್ರಾಹ್ಮಣನಾಗಿದ್ದ । ಪರಿಪಕ್ವ ನಮಗಿ ।
ಸ್ನಾನ ಕಾಲಕೆ ಆಗಬೇಕೆಂದ । ವೈರಾಗ್ಯ ಭಾಗ್ಯದಿ ।
ಜೀವಿಸಿ ಕೊಂಡಿಪ್ಪುದೇ ಚಂದ । ಹೀಗೆನುತ ಮನೆಧನ ।
ಕೋವಿದರ ಕರೆದಿತ್ತು ಹರುಷದಿ । ಕಾವನಯ್ಯನ ದಾಸನಾದ ॥ ೭ ॥

ಲಕ್ಷ್ಮೀಪತಿಯ ಪಾದದಲ್ಲಿ । ಲಕ್ಷ್ಯವಿಟ್ಟು ವ್ಯಾಸರಾಯರ
ಶಿಕ್ಷೆಯಿಂದಂಕಿತವ ಕೊಳ್ಳುತ್ತ । **ಪದ ತೊರಾದ್ವೈದು ।**
**ಲಕ್ಷ ಪದ ಸುಳಾದಿ ಪೇಳುತ್ತ ।** ಪ್ರತಿದಿವಸದಲ್ಲೂ ।
ಪಕ್ಷಿವಾಹನನಾಟ್ಯವಾಡುತ್ತ । ಅಪರೋಕ್ಷ ಜ್ಞಾನಿಯು ।
ಮೋಕ್ಷ ಸ್ಥಾನಕೆ ಕರೆದುಒಯ್ದನ ।–ಧೋಕ್ಷಜನು ತಾ
ಬೆನ್ನಬಿಡದೆ ॥ ೮ ॥

**ಘೋರ ನರಕದೊಳಗೆ ಬಿದ್ದಾ । ಪಾರ ಜನರು ಚೀರುತಿರಲು।**
**ದ್ಧಾರಮಾಡಿದ ನಾರದರಿವರು । ಪಾಮರರ ಪಾಲಿಸೆ ।**
**ಧಾರುಣಿಯೊಳವತಾರ ಮಾಡಿದರು । ಹರಿಸರ್ವೋತ್ತಮನೆಂ।**
**ದೋರಂತೆ ಧರೆಯೊಳಗೆ ಬೀರಿದರು । ಹೀಗೆನುತತಿಳಿಯುಲು ।**
**ಮಾರಜನಕ ವಿಜಯವಿಠಲ । ಯಾರಿಗಾದರು**
**ಒಲಿವಕಾಣಿರೋ ॥ ೯ ॥**

ದಾಸರಾಯರ ಸಂಕ್ಷಿಪ್ತ ಜೀವನ ಚರಿತ್ರೆಯ ಸಹಿತವಾಗಿ ಸ್ತೋತ್ರ ಮಾಡಿರುವ ಈ ಪದ್ಯವೂ ನಿತ್ಯಪಾರಾಯಣಕ್ಕೆ ಅನುಕೂಲವಾಗುವುದರಿಂದ ಉದಾಹರಿಸಲಾಗಿದೆ.

**ರಾಗ ಪೂರ್ವಿ ಛಾಪು—ತಾಳ**

ಗುರು ಪುರಂದರ ದಾಸರೇ ನಿಮ್ಮ ಚರಣ ಸರಸಿಜ ನಂಬಿದೆ ॥ ಪ ॥
ಗರುವ ರಹಿತರ ಮಾಡಿ ನಮ್ಮನು ಪೊರೆವ ಭಾರವು ನಿಮ್ಮದೆ ॥ಅ ಪ ॥

ಒಂದು ಅರಿಯದ ಮಂದಮತಿ ನಾನಿಂದು ನಿಮ್ಮನು ವಂದಿಪೆ ।
ಇಂದಿರೇಶನ ತಂದು ತೋರಿಸಿ ತಂದೆ ಮಾಡಲೊ ಸತ್ಕೃಪೆ ॥ ೧ ॥

ಪುರಂದರ ಘಡದೊಳಗೆ ನಿಂದು ನಿರುತ ದ್ರವ್ಯದ ಘಳಿಸಿದೆ ।
ಪರಮ ಪುರುಷನು ವಿಪ್ರನಂದದಿ ಕರವ ನೀಡಿ ಯಾಚಿಸೆ ॥ ೨ ॥

**ಪರಮ** ನಿರ್ಘೃಣ ಮನವನರಿತು ಹರಿಗೆ ಸೂರೆಯ ನೀಡುತ ।
**ಅರಿತು** ಮನದೊಳು ಹರಿದು ಭವಗಳ ತರುಣಿ ಸಹಿತ
ಹೊರಟನೆ ॥ ೩ ॥

ಮಾರ ಜನಕನ ಸನ್ನಿಧಾನದಿ ಸಾರಗಾನವ ಮಾಡುವ ।
**ನಾರದರೆ** ಈ ರೂಪದಿಂದಲಿ ಚಾರು ದರುಶನ ತೋರಿದ ॥ ೪ ॥

ಅಜಭವಾದಿಗಳರಸನಾದ ವಿಜಯವಿಠಲನಧ್ಯಾನಿಪ ।
ನಿಜ ಸುಜ್ಞಾನವ ಕೊಡಿಸಬೇಕೆಂದು ಭಜಿಪೆನೋ ಕೇಳ್
ಗುರುವರ ॥ ೫ ॥

**ಶ್ರೀ ಪುರಂದರ ವಿಠಲಾಯ ನಮಃ**



|| ಶ್ರೀ ಕೃಷ್ಣಾಯನಮಃ ||

|| ಶ್ರೀ ಭಾರತೀರಮಣಾಯನಮಃ ||

ಶ್ರೀ ಮದ್ವಾವಿಸನಿಾರವಾದಿರಾಜ ಗುರುಭ್ಯೋನಮಃ

# ಭಕ್ತ ಪುರಂದರದಾಸರು

## ಪುರಂದರ ಘಡದಲ್ಲಿ

ಶ್ರೀ ಹರಿದಾಸ ಪಂಥದಲ್ಲಿ ಯಾರು ಎಷ್ಟೇ ಕೆಲಸ ಮಾಡಿದ್ದರೂ ಶ್ರೀ ಪುರಂದರ ದಾಸರ ಹೆಸರು ಹೇಳದ ವಿನಹ ಪೂರ್ಣತೆಯಾಗುವಂತಿಲ್ಲ. ಕರ್ಣಾಟಕ ಹರಿದಾಸರಲ್ಲಿ ಪುರಂದರ ದಾಸರ ಹೆಸರು ವ್ಯಾಪಕವಾದುದು. ಭರತ ಖಂಡದಲ್ಲಿ ಇವರ ಹೆಸರನ್ನು ಅರಿಯದವರಿಲ್ಲ. ದ್ವೀಪಾಂತರದಲ್ಲಾದರೂ ಸರ್ವತೋಮುಖವಾಗಿ ಅಲ್ಲದಿದ್ದರೂ ಭಾರತದ ಭಕ್ತರಲ್ಲಿ †'Purandara das was one of the formest Devotional Saints of Karnatak' ಎಂಬಷ್ಟನ್ನಾದರೂ ಬಹುಮುಖವಾಗಿ ತಿಳಿದಿದ್ದಾರೆ. ತತ್ರಾಪಿ ಪುರಂದರ ದಾಸರ ಒಂದು ದೇವರ ನಾಮ—ಒಂದುನುಡಿ—ಅದಿಲ್ಲದಿದ್ದರೂ ಪದದಲ್ಲಿರುವ ಒಂದು ಶಬ್ದವನ್ನಾದರೂ ಸಮಯೋಚಿತವಾಗಿ ಉದಾಹರಿಸದವರಿಲ್ಲ. ಕನ್ನಡಿಗರಲ್ಲಂತೂ ಇಲ್ಲವೇ ಇಲ್ಲ.

ಇವರಂತಹ ಶ್ರೀಮಂತರೂ ಬೇರೊಬ್ಬರಿಲ್ಲ. ಇವರಂತಹ ಲೋಭಿಗಳೂ ಬೇರೊಬ್ಬರಿಲ್ಲ. ಮುಂದೆ ಇವರಂತಹ ಔದಾರ್ಯ ತೋರಿದವರೂ

---

[†Mystic teachings of the Haridas of Karnatak—by A. P. Karmarkar M. A. L.L.B., & N. B. Kalamdani Page 51]

ಬೇರೊಬ್ಬರಿಲ್ಲ. ಇವರಂತಹ ಗ್ರಂಥಕರ್ತರೂ ಬೇರೊಬ್ಬರಿಲ್ಲ. (ವ್ಯಾಸರ ನಂತರ ಗ್ರಂಥಕರ್ತರ್‍ಯಾರೆಂದರೆ ಪುರಂದರ ದಾಸರೇ. ಭಕ್ತಿಪಂಥದ ಪುನರುದ್ಧಾರಕರ್ತರಲ್ಲಿ ಪುರಂದರದಾಸರು ಶ್ರೇಷ್ಠ ಸ್ಥಾನಾಪನ್ನರು. ಇವರ ಜೀವನ ಚರಿತ್ರೆಯಲ್ಲಿ ನಡೆದಿರುವ ಘಟನಾವಳಿಗಳು ಮಾನವರಿಗೆ ಆದರ್ಶ.

ಹರಿದಾಸ ರತ್ನ ಮಾಲೆಯಲ್ಲಿ ಶಿಖಾಮಣಿಪ್ರಾಯರಾದ ಮಾರ್ಜಾರ ಕಿಶೋರ ನ್ಯಾಯ ಭಕ್ತಶ್ರೇಷ್ಠರು ಭಕ್ತ ಪುರಂದರದಾಸರು.

ಪಂಢರಾಪುರಕ್ಕೆ ಅನತಿ ದೂರದಲ್ಲಿರುವ §ಪುರಂದರ ಘಡವೆಂಬಲ್ಲಿ ವರದಪ್ಪನೆಂಬ ದೇಶಸ್ಥ ಬ್ರಾಹ್ಮಣನೋರ್ವನಿದ್ದನು. ಈತನ ಪತ್ನಿಯ ಹೆಸರು ಲಕ್ಷ್ಮೀ ಬಾಯಿ. ಇವನು ನಾಯಕ ಮನೆತನದವನು. ಆಪದ್ಧರ್ಮವೆನಿಸಿದ ವ್ಯಾಪಾರವೃತ್ತಿಯನ್ನನುಸರಿಸಿ ಆಚಾರಶೀಲನಾಗಿ ಧರ್ಮಭೀರುವಾಗಿದ್ದನು. ಭಾಗವತ ಸಂಪ್ರದಾಯವನ್ನನುಸರಿಸಿದ್ದನು. ಬರಬರುತ್ತಾ ರತ್ನಪಡಿವ್ಯಾಪಾರದಲ್ಲಿ ವೃದ್ಧಿಹೊಂದಿ ಶ್ರೀಮಂತನಾದನು. ಸಂಸಾರದಲ್ಲಿ ಎಲ್ಲ ಸುಖಗಳಲ್ಲಿ ಮುಖ್ಯವಾದ ಪುತ್ರ ಸೌಖ್ಯವಿಲ್ಲೆಂಬ ಚಿಂತೆ ಸತಿಪತಿಗಳಿಗುಂಟಾಗಿ ಕುಲಪತಿಯಾದ ಶ್ರೀನಿವಾಸನನ್ನು ಸೇವಿಸಲು ತಿರುಪತಿಗೆ ಬಂದು ಬಹುನಿಷ್ಠೆಯಿಂದ ಸ್ವಾಮಿಯ ಸೇವೆಮಾಡಿದರು.

---

§ ಪುರಂದರ ಘಡವೆಂಬುದು ಆ ಕಾಲದಲ್ಲಿ ಕರ್ಣಾಟಕವಾಗಿತ್ತು ಎಂಬುದನ್ನು ವಾಚಕರು ಸ್ಮೃತಿಪಥಕ್ಕೆ ತಂದುಕೊಳ್ಳಬೇಕು. ಈಗ ಪೂನಾ ಡಿಸ್ಟ್ರಿಕ್ಟಿಗೆಸೇರಿ ಮಹಾರಾಷ್ಟ್ರವಾದುದು ಕನ್ನಡಿಗರ ದೌರ್ಬಲ್ಯದಿಂದ ಎಂದುಕೊಳ್ಳಬೇಕಾಗಿದೆ.

ಪುರಂದರನಾಮಕ ಇಂದ್ರದೇವರು ಈ ಪ್ರದೇಶದಲ್ಲಿ ಭಗವಂತನನ್ನು ಮೆಚ್ಚಿಸಿ ವರ ಪಡೆದಂದಿನಿಂದ ಇದಕ್ಕೆ ಪುರಂದರ ಘಡವೆಂಬ ಹೆಸರಾಯಿತೆಂದೂ, (ಈ ಪ್ರದೇಶಕ್ಕೆ ಪುರಂದರದಾಸರು ಅವತರಿಸುವ ಮೊದಲು ಬೇರೇನೋ ಹೆಸರಿದ್ದಿರಬೇಕು) ಇಲ್ಲಿಯವರಾದ ಪುರಂದರ ದಾಸರು ಲೋಕವಿಖ್ಯಾತರಾದ ಮೇಲೆ ಪುರಂದರ ದಾಸರ ನಂತರ ಅವರ ಸ್ಮಾರಕವಾಗಿ ಜನರು ಪುರಂದರ ಘಡವೆಂದೇ ಕರೆಯತೊಡಗಿದರೆಂದೂ ಪ್ರತೀತಿ ಇದೆ.

ಘಡ=ಘಾಟ್ ಅಥವಾ ಘಾಟ ಎಂದರ್ಥ.

ಇತ್ತ ಶ್ರೀಹರಿಯ ಆಜ್ಞೆಯಂತೆ ಭೂಲೋಕದಲ್ಲಿ ಅವತರಿಸಬೇಕೆಂದು ಸಂಕಲ್ಪಿಸಿದ್ದ ನಾರದರು ದೇಶಕಾಲಪಾತ್ರಗಳನ್ನರಸುತ್ತಿದ್ದವರು, ಈ ದಂಪತಿಗಳು ಸುಜೀವಿಗಳೆಂಬುದನ್ನು ಅರಿತು ಇವರ ಪುಣ್ಯಗರ್ಭದಲ್ಲಿ ಜನಿಸುವುದಾಗಿ ನಿಶ್ಚೈಸಿದರು.

ತಿರುಪತಿಯಲ್ಲಿ ಈ ದಂಪತಿಗಳ ಸೇವೆಯಿಂದ ಸಂತುಷ್ಟನಾದ ಶ್ರೀನಿವಾಸನು 'ನಿಮಗೋರ್ವ ಸುಪುತ್ರನು ಜನಿಸಿ ಜಗದ್ವಿಖ್ಯಾತನಾಗಿ ಕುಲವನ್ನು ಪಾವನಗೊಳಿಸುವನು' ಹೀಗೆ ಸ್ವಪ್ನದಲ್ಲಿ ಸೂಚಿಸಿ ಪರಮಾನುಗ್ರಹ ಮಾಡಿದನು. ವೆಂಕಟೇಶನ ಆಜ್ಞೆಯಿಂದ ಸಂತೋಷಭರಿತರಾಗಿ ಸ್ವಾಮಿಗೆ ಅಭಿವಂದಿಸಿ ಅಪ್ಪಣೆಯನ್ನು ಪಡೆದು ತಮ್ಮೂರಿಗೆ ಬಂದರು.

ಪರಮೇಶನ ಅನುಗ್ರಹದಿಂದ ಗರ್ಭವತಿಯಾದ ಲಕ್ಷ್ಮೀಬಾಯಿಯು ಶುಭಲಕ್ಷಣೋಪೇತನಾದ ಪುತ್ರನನ್ನು ಪಡೆದಳು§. ಸುಕುಮಾರನಿಗೆ ವರದಪ್ಪನು ಶ್ರೀನಿವಾಸನೆಂದು ನಾಮಕರಣ ಮಾಡಿದನು. ಇವರೇ ನಮ್ಮ ಕಥಾನಾಯಕರಾದ **ಶ್ರೀ ಪುರಂದರದಾಸಾರ್ಯರು.** ಶ್ರೀನಿವಾಸನಿಗೆ ವರದಪ್ಪನು ಚವಲೋಪನಯನಾದಿಗಳನ್ನು ಮಾಡಿದನು. ಬಾಲಕನಿಗೆ ಕನ್ನಡ, ಸಂಸ್ಕೃತ, ವಿದ್ಯಾಭ್ಯಾಸವನ್ನು ಮಾಡಿಸಿದನು. ಮಗನು ಯಾವಾಗಲೂ ಪದಗಳನ್ನು ಹಾಡುತ್ತಿದ್ದುದನ್ನು ಕೇಳಿ ಮಗನಿಗೆ ನೈಸರ್ಗಿಕವಾಗಿ ಸಂಗೀತದಲ್ಲಿ ಅಭಿರುಚಿಯಿರುವುದನ್ನೂ ಅರಿತು ಸಂಗೀತ ಶಾಸ್ತ್ರಾಭ್ಯಾಸವನ್ನು ಮಾಡಿಸಿದನು. ಧರ್ಮಾಭಿಮಾನಿಯಾದ ವರದಪ್ಪನು ಮಗನಿಗೆ ಧರ್ಮಶ್ರದ್ಧೆ ಉಂಟಾಗಲೆಂದು ತಕ್ಕಷ್ಟು ಧಾರ್ಮಿಕ ವಿದ್ಯಾಭ್ಯಾಸವನ್ನೂ ಮಾಡಿಸಿ ಪ್ರಾಪ್ತವಯಸ್ಕನಾಗುತ್ತಿರುವ ಮಗನಿಗೆ ರತ್ನಪಡಿ ವ್ಯಾಪಾರಕ್ಕೆ ಅತ್ಯವಶ್ಯವಾದ ರತ್ನಪರೀಕ್ಷಾ ಕ್ರಮವನ್ನು ಕಲಿಸಿ, ತಕ್ಕ ಅನುಭವವನ್ನು ಕೊಟ್ಟನು.

ತನ್ನ ಐಶ್ವರ್ಯಕ್ಕೆ ತಕ್ಕಂತೆ ಸತ್ಕುಲ ಪ್ರಸೂತೆಯೂ ಸುಶೀಲೆಯೂ ಸುರೂಪಿಣಿಯೂ ಆದ ಸರಸ್ವತಿ‡ಎಂಬ ಕನ್ಯೆಯನ್ನು ವಿವಾಹಮಾಡಿದನು.

---

§ಶಾ. ಶಕ ೧೪೦೬ ಕ್ರಿ. ಶ 1484

‡ಈಕೆಗೆ ಲಕ್ಷ್ಮಿ ಎಂಬ ಹೆಸರೆಂದೂ ದಾಸ ಸಂಪ್ರದಾಯವಾದಿಗಳನೇಕರ ಅಭಿಪ್ರಾಯವಿದೆ.

ಕೆಲಕಾಲಾನಂತರದಲ್ಲಿ ವರದಪ್ಪ ದಂಪತಿಗಳು ಮರ್ತ್ಯಲೋಕದ ನಿಯಮದಂತೆ ಪರಲೋಕವನ್ನು ಕುರಿತು ಪ್ರಯಾಣ ಮಾಡಿದರು.

ಸಂಪೂರ್ಣ ಅಧಿಕಾರ ಶೀನಪ್ಪನದಾಯ್ತು. ಶೀನಪ್ಪನು ಶ್ರೀನಿವಾಸ ನಾಯಕನಾದನು. ನಾಯಕರು ವ್ಯಾಪಾರದಲ್ಲಿ ಬಹುಚತುರರಾಗಿ ತಂದೆಯು ಲಕ್ಷಾಧಿಪತಿ ಎಂದು ಖ್ಯಾತನಾಗಿದ್ದರೆ, ಇವರು ಕೋಟ್ಯಾಧೀಶ್ವರರಾದರು. ಅತುಲೈಶ್ವರ್ಯವಂತರಾಗಿ ಆಕಾಲದಲ್ಲಿ ಇರುತ್ತಿದ್ದ ರಾಜರುಗಳಿಗೆ ಅವಶ್ಯ ಬಿದ್ದಾಗ ಹಣ ಒದಗಿಸುವ ಹೊಣೆಗಾರಿಕೆಹೊತ್ತು ಎಲ್ಲಾ ರಾಜಾಸ್ಥಾನ ಗಳಲ್ಲಿಯೂ ಮಾನ್ಯ ಗೃಹಸ್ಥರೆನಿಸಿ ರಾಜ ಸಭಾಭೂಷಣರಾದ ಗೌರವಾರ್ಹ ರಾದರು. ಆ ಕಾಲದ ಅನೇಕ ರಾಜರುಗಳು ಒಮ್ಮತದಿಂದ ನಾಯಕರಿಗೆ **ನವಕೋಟಿ ನಾರಾಯಣ**ನೆಂಬ ಬಿರುದನ್ನಿತ್ತರು. ತಮ್ಮ ಮನೆಗೆ ಸುವ ರ್ಣದ ನವಕಲಶಗಳನ್ನಿಟ್ಟರು. ಅಂದಮೇಲೆ ಭರತ ಖಂಡದ ಇತಿಹಾಸ ದಲ್ಲಿ ಇಂತಹ ಶ್ರೀಮಂತರು ಇನ್ನೊಬ್ಬರಿಲ್ಲವೆಂದೇ ಹೇಳಬೇಕಾಗುವುದು.

## ಲೋಭಿಯೋ ನಾಸ್ತಿಕನೋ

ಅಖಂಡೈಶ್ವರ್ಯ, ಮೇಲಾಗಿ ಅಧಿಕಾರ, ಇನ್ನು ಯೌವನ, ಅನು ಕೂಲಳಾದ ಪತ್ನಿ ಅಂದಮೇಲೆ—ಕೇಳುವುದೇನು

**ಯೌವ್ವನಂ ಧನಸಂಪತ್ತಿಃ ಪ್ರಭುತ್ವಂ ಅವಿವೇಕತಾ ।**
**ಏಕೈಕಮಪ್ಯನರ್ಥಾಯ ಕಿಮುಯತ್ರ ಚತುಷ್ಟಯಂ ॥ ೧೫—೭**

(ನಾರದೀಯ ಪುರಾಣ ಪೂರ್ವ ಭಾಗ ಪ್ರಥಮ ಪಾದ)

ಎಂದು ರಾಜಾಬಾಹುವಿನ ಅವನತಿಯ ಕಾರಣವನ್ನು ನಾರದರಿಗೆ ಸನಕಮುನಿಯು ಉಪದೇಶಿಸಿದುದಾಗಿ ಶ್ರೀ ಬಾದರಾಯಣರು ಅಪ್ಪಣೆ ಕೊಡಿಸಿದ್ದಾರೆ. ಅದರಂತೆಯೇ ನಾಯಕರಲ್ಲಿ ಅವಿವೇಕವೂ ತಲೆದೋರಿ ನಿರ್ಘೃಣರಾದ ನಾಸ್ತಿಕರಾದರು. ಶ್ರೀಮಂತಿಕೆಯಲ್ಲಿ ಹೇಗೆ ವಿಖ್ಯಾ ತರೋ ಲೋಭಿಗಳಲ್ಲೂ ಅಷ್ಟೇ ಪ್ರಸಿದ್ಧರಾದರು. ಇಂದಿಗಾದರೂ ಲೋಭಿ ಗಳ ಗುಣಕಥನ ಮಾಡಲು ಹೊರಟರೆ 'ಅವನೇನಪ್ಪ! ಕಡುಲೋಭಿ!

ಪುರಂದರದಾಸ!' ಎಂಬುದಾಗಿ ಹೇಳುವ ರೂಢಿಯೇ ಆಗಿದೆ. ಆದರೆ ಒಂದು ವಿಷಯವನ್ನು ವಾಚಕರು ಗಮನಿಸಬೇಕು. ನಾಯಕರು ಪುರಂದರ ದಾಸರಾದ ಮೇಲೆ ಲೋಭಿಗಳಾಗಿರಲಿಲ್ಲ. 'ಪುರಂದರದಾಸರಾದ ನಾಯಕ ರಂತೆ' ಎಂಬುದಾಗಿ ಹೇಳಬೇಕಾದುದು 'ಪುರಂದರದಾಸರಂತೆ' ಎಂಬುವ ಅಪದ್ಧರೂಢಿಯಾಗಿದೆ.

ನಾಯಕರ ಜಿಪುಣತ್ವದ ಪರಮಾವಧಿಯೆಂದರೆ ಮನೆಯಲ್ಲಿ ನಿತ್ಯ ಉಪಯೋಗಿಸುವ ಸಾಹಿತ್ಯಗಳ ಮೇಲೂ ಅರ್ಧಾಂಗಿಗೇ ಅಧಿಕಾರ ಕೊಟ್ಟಿರಲಿಲ್ಲ. ಎಲ್ಲದಕ್ಕೂ ಬೀಗಮುದ್ರೆ ಮಾಡಿ ಸಾಸಿವೆ ಕಾಳನ್ನಾದರೂ ಅಳೆದುಕೊಡದೆ ಒಗ್ಗರಣೆ ಸಮಯಕ್ಕೆ ಎಣಿಸಿಕೊಡುತ್ತಿದ್ದರು. ಎಂಜಲು ಕೈಯಲ್ಲಿ ಕಾಗೆ ಹೊಡೆಯುದಿರುವುದಿರಲಿ, ಬರೀಕೈಯಲ್ಲೂ ಕಾಗೆ ಹೊಡೆದರೆ ನಿಷ್ಪ್ರಯೋಜಕವಾಗಿ ಕೈ ಬೀಸಿದಂತಾಗುವುದೆಂದು ಅದರಲ್ಲೂ ಲೋಭತ್ವ ಮಾಡುವಂತಹ ಕಡುಲೋಭಿ. ಈ ಲೋಭಗುಣದಿಂದ ಪರಲೋಕ, ಪಾಪ ಪುಣ್ಯ, ಧರ್ಮಾಧರ್ಮ, ದೇವಬ್ರಾಹ್ಮಣರು ಎಂಬುವ ಅರಿವೇ ಇಲ್ಲವಾ ಯಿತು. ಪರೋಪಕಾರ ಭೂತದಯೆ ಎಂಬುದು ಹೆಸರಿಲ್ಲದೆ ಹೋಯ್ತು. ಯಾಚಕರನ್ನು ಕಂಡರೆ ಶತ್ರುಗಳನ್ನು ಕಂಡಂತೆ ಕಿಡಿಕಿಡಿಯಾಗುತ್ತಿದ್ದರು. ಅಂತೂ ನಾಯಕರು ಲೋಭಿಯೋ! ನಾಸ್ತಿಕನೋ! ಎಂದು ಜನಗಳೆಂದು ಕೊಳ್ಳುವ ಹಾಗಾಯಿತು.

ನಾಯಕರ ಮತ್ತು ಅವರ ಪತ್ನಿಯ ಗುಣಗಳು ಪೂರ್ವ ಪಶ್ಚಿಮ ದಂತಿದ್ದುವು. ನಾಯಕರು ಲೋಭಿ, ಸರಸ್ವತಿಯು ಉದಾರಿ—ನಾಯಕ ರಿಗೆ ಯಾಚಕರು ಶತ್ರುಗಳು, ಸರಸ್ವತಿಗೆ ಮಿತ್ರರು—ನಾಯಕರು ನಾಸ್ತಿ ಕರು, ಸರಸ್ವತಿಯು ಆಸ್ತಿಕಳು. ಪತಿಯು ನಾಸ್ತಿಕನಾಗಿ ಇರುವುದನ್ನು ಕಂಡು ಬಹುಕನಿಕರದಿಂದ ಆಗಾಗ ಪತಿಗೆ ಎಷ್ಟು ಹಿತೋಕ್ತಿಗಳನ್ನು ಹೇಳಿ ದರೂ ಬಂಜರುಭೂಮಿಯಲ್ಲಿ ಬೀಜ ಬಿತ್ತಿದಂತಾಯ್ತು. ಶ್ರೀಹರಿಯೇ ತನ್ನ ಪತಿಗೆ ಸನ್ಮಾರ್ಗವನ್ನು ತೋರಿಸಬೇಕೆಂದು ಭಕ್ತವತ್ಸಲನಾದ ಶ್ರೀನಿ ವಾಸನನ್ನು ಪ್ರಾರ್ಥಿಸುತ್ತಿದ್ದಳು. ಹಾಗೆಂದು ಪತಿಯನ್ನು ಬೇಸರಪಡಿ ಸಿದವಳಲ್ಲ.

**ದಾನಂ ಭೋಗೋ ನಾಶೋ ತಿಸ್ರೋ ಗತಯೋ ಭವನ್ತಿ ವಿತ್ತಸ್ಯ**
**ಯೋನದದಾತಿ ನಭುಂಕ್ತೇ ತಸ್ಯ ತೃತೀಯಾ ಗತಿರ್ಭವತಿ॥ ಭರ್ತೃಹರಿ—**

**ತಾ** ॥ ದಾನ, ಭೋಗ, ನಾಶಗಳೆಂಬ ಮೂರು ಗತಿಗಳು ವಿತ್ತಕ್ಕೆ ಉಂಟಾಗುವುದು. ಯಾವನು ದಾನಮಾಡದೇ ತಾನೂ ಉಣ್ಣದೇ ಇರುವನೋ ಅವನ ವಿತ್ತವು ಮೂರನೇ ಗತಿಯಾದ ನಾಶವನ್ನು ಹೊಂದುವುದು—ಎಂಬುದನ್ನು ಲೋಭಿಗಳು ಯೋಚಿಸುವುದೇ ಇಲ್ಲ.

ಶ್ರೀಪತಿಯು ತಾನು ನಾರದರನ್ನು ಸಜ್ಜನರ ಉದ್ಧಾರಕ್ಕಾಗಿ ಕಳಿಸಿರಲು ಜನ್ಮವೆತ್ತಿದ ನಾರದನು ಮರ್ತ್ಯಲೋಕ ಸಂಬಂಧದಿಂದ ಕರ್ತವ್ಯ ವಿಮುಖನಾಗಿರುವುದನ್ನು ಕಂಡು, ಈಗ ಮೊದಲು ನಾರದನನ್ನು ಎಚ್ಚರಿಸಬೇಕೆಂದು ವೃದ್ಧ ಬ್ರಾಹ್ಮಣಯಾಚಕನಾಗಿ ಜತೆಯಲ್ಲಿ ಅನುಪನೀತ (ಚತುರ್ಮುಖ ಬ್ರಹ್ಮದೇವರೇ ಈ ಬಾಲಕನೆಂದು ಶ್ರದ್ಧಾಳುಗಳ ಅಭಿಪ್ರಾಯ.) ಬಾಲಕನೊಬ್ಬನನ್ನು ಕರೆದುಕೊಂಡು ನಾಯಕನ ಬಳಿಗೆ ಬಂದನು.

ನಾಯಕರು ಇಂತಹರನ್ನು ಕಣ್ಣೆತ್ತಿಯೂ ನೋಡುವವರಲ್ಲ. ಈ ಬಡವನನ್ನು ಕಂಡೂ ಕಾಣದಂತೆ ತಿರಸ್ಕಾರದಿಂದ ತಮ್ಮ ಕಾರ್ಯದಲ್ಲಿ ತಾವಿದ್ದರು. ನಾಯಕರಿಗೆ ತಾನುಬಂದ ಕಾರ್ಯವನ್ನು ತಿಳುಹಿಸಲಿಕ್ಕೇ ಈ ಮಹಾಬ್ರಾಹ್ಮಣ ಆರು ತಿಂಗಳ ಕಾಲ ಬಿಡದೆ ಪ್ರತಿದಿನ ದಿನಕ್ಕೆ ಮೂರು ಬಾರಿ ಅಂಗಡಿಗೆ ಹೋಗಿ ಭೇಟಿಗಾಗಿ ಕಾಯುತ್ತಿದ್ದನು. ಇಷ್ಟಾದರೂ ನಾಯಕರು ಇವನ ಮೇಲೆ ಕಿಂಚಿತ್ ಕ್ಷಣಿಕ ಕಟಾಕ್ಷವನ್ನೂ ಬೀರಲಿಲ್ಲ. ಬಂದವನು ಸಾಮಾನ್ಯನೇ! ಇವನು ಬಿಡಲಿಲ್ಲ! ಕಡೆಗೊಂದು ದಿವಸ 'ನಾಯಕರೇ! ನಾನೊಬ್ಬ ಮುದಿ ಬ್ರಾಹ್ಮಣ. ನನ್ನ ಮಗನಿಗೆ ಉಪನಯನ ಕಾಲ ಮೀರುತ್ತಾ ಬಂತು. ನಮ್ಮವರು ಬಹುವಾಗಿ ಆಕ್ಷೇಪಿಸುವರು. ನನಗಾದರೋ ಅತಿದಾರಿದ್ರ್ಯ ಬೆನ್ನುಹತ್ತಿದೆ. ನಾಲ್ಕೆಂಟು ಕಡೆ ಹೋಗಿ ಯಾಚಿಸಲು ವೃದ್ಧಾಪ್ಯ, ಆದುದರಿಂದ ಪುಣ್ಯವಂತರಾದ ತಾವು ಬಹುಜನ್ಮಸುಕೃತ ವಿಶೇಷದಿಂದ ಲಕ್ಷ್ಮೀಪುತ್ರರೆನಿಸಿರುವವರಾಗಿ ಬ್ರಹ್ಮೋಪದೇಶದಂತಹ ಮಹಾಪುಣ್ಯಕಾರ್ಯಕ್ಕೆ ದೊಡ್ಡ ಮನಸ್ಸುಮಾಡಿ ತಾವೂ ಪುಣ್ಯಭಾಗಿಗಳಾಗಿ

ನನ್ನನ್ನು ಸಮಾಜದವರ ಆಕ್ಷೇಪಣೆಗೆ ಗುರಿಯಾಗದಂತೆ ಮಾಡಿ!' ಎನ್ನಲು ಪೂರ್ವಜನ್ಮ ಸುಕೃತ ವಿಶೇಷದಿಂದ ಕೋಟ್ಯಾಧೀಶ್ವರರಾಗಿರುವ-

**ನಾಯಕರು:**—(ಹುಬ್ಬುಗಂಟಿಕ್ಕಿ) ಏನು? ಏನು?

**ಬ್ರಾಹ್ಮಣ:**—ನಾನು ಹೇಳಿದ್ದು ತಮಗೆ ಕೇಳಿಸಲೇ ಇಲ್ಲವೇ?

**ನಾ:**—ನಾನು ನಿರುದ್ಯೋಗಿಯಾಗಿ ಅನವಶ್ಯಕ ಮಾತುಗಳಿಗೆ ಕಿವಿಗೊಡುವವನಲ್ಲ.

**ಬ್ರಾ:**-ನಾಯಕರೇ ಇದು ಅನವಶ್ಯಕವಲ್ಲ, ಉಪನಯನದ ವಿಷಯ-ಬಹು ಪುಣ್ಯಕಾರ್ಯ—ತಾವು ಪುಣ್ಯಶಾಲಿಗಳು!

**ನಾ:**—ಈ ಕಥೆ ನನಗೆ ಅವಶ್ಯಕವಿಲ್ಲ! ಮುಖಸ್ತುತಿಗೆ ಮರುಳಾಗಿ ಬಲೆಯಲ್ಲಿ ಬೀಳುವವನು ನಾನಲ್ಲ!

**ಬ್ರಾ:**—ನಾಯಕರೇ ನಾನು ಬ್ರಾಹ್ಮಣ!

**ನಾ:**—ಹೌದು. ಅದಕ್ಕೇನು ಮಾಡಬೇಕು?

**ಬ್ರಾ:**—ವೃದ್ಧಾಪ್ಯ!

**ನಾ:**—ಹೌದಯ್ಯ! ವಯಸ್ಸಾದ ಮೇಲೆ ಎಲ್ಲರೂ ವೃದ್ಧರಾಗೋದೇ!

**ಬ್ರಾ:**—ಬಹಳ ದಾರಿದ್ರ್ಯ ಅದರಿಂದ ಅತಿ ಕಷ್ಟ.

**ನಾ:**—ಎಲ್ಲರ ಕಷ್ಟ ಸುಖಗಳನ್ನು ವಿಚಾರಿಸುವುದಕ್ಕಾಗಿಯೇ ನಾನು ಇಲ್ಲಿ ಕುಳಿತಿಲ್ಲ!

**ಬ್ರಾ:**—ನೀವು ಅದಕ್ಕಾಗಿ ಕುಳಿತವರಲ್ಲದಿದ್ದರೂ ನಾನು ನನ್ನ ಕಷ್ಟ ಸುಖಗಳನ್ನು ತಿಳಿಸುವುದಕ್ಕಾಗಿಯೇ ಬಂದಿರುವೆನು.

**ನಾ:**—ನೀನೆಂತಹ ಮೊಂಡ ಬ್ರಾಹ್ಮಣನಯ್ಯ!

**ಬ್ರಾ:**— ಬ್ರಹ್ಮೋಪದೇಶಕ್ಕಿಂತಲೂ ಮಿಗಿಲಾದ ಪುಣ್ಯಕಾರ್ಯವಿಲ್ಲ ಇಂತಹ ಪುಣ್ಯಕಾರ್ಯಕ್ಕೆ ಸಹಾಯಮಾಡಿ ದೇವತಾನುಗ್ರಹಕ್ಕೆ ಪಾತ್ರರಾಗಿ!

**ನಾ:**—ಇವತ್ತು ಉಪನಯನ, ನಾಳೆ ಮದುವೆ, ನಾಡದ್ದು ಶ್ರಾದ್ಧ, ಆ ಮೇಲೆ ಕಾಶೀಯಾತ್ರೆ, ನಿತ್ಯವೂ ನಿಮ್ಮಂತಹರು ಬರುತ್ತಲೇ ಇರುತ್ತಾರೆ!

ಊರಲ್ಲಿ ನಡೆಯುವ ಕಾರ್ಯಗಳಿಗೆಲ್ಲಾ ಸಹಾಯಕನಾಗುತ್ತೇನೆಂದು ನಾನು ಹರಕೆಹೊತ್ತಿಲ್ಲ. ದುಡ್ಡುಕೊಟ್ಟು ಸಂಪಾದನೆಮಾಡುವ ಆ ಪುಣ್ಯವೂ ನನಗೆ ಬೇಕಿಲ್ಲ!

**ಬ್ರಾ:** —ನಾಯಕರೇ ಆರು ತಿಂಗಳಿಂದಲೂ ನಿಮ್ಮಂಗಡಿ ಬಾಗಿಲಿಗೆ ಅಂಡಲೆದು ನನ್ನ ಪಾದಗಳು ಸವೆದುಹೋದುವು. ಇಷ್ಟು ನಾನು ತಿರುಗಿದ್ದ ಕ್ಕಾದರೂ ಏನಾದರೂ ಸಹಾಯ ಮಾಡಬೇಡವೇ?

**ನಾ:** —'ಈತನನ್ನು ಒಳಗೆ ಬಿಡುವವರ್‍ಯಾರೋ' ಎಂದು ಗೊಣಗಿ ಕೊಂಡರು. ಆಗ ಬ್ರಾಹ್ಮಣನು' ನಾಯಕರೇ "ದೇಶಂ ವಿಶಾಲ: ಪ್ರಭವೋಽ ಪ್ಯನಂತಾಃ' ನೀವು ನೊಂದುಕೊಳ್ಳುವುದೇಕೆ, ಮಾಡುವುದಾದರೆ ಸಹಾಯ ಮಾಡಿ ಇಲ್ಲವಾದರೆ ಹೊರಡುವೆನು" ಎಂದು ನಿಷ್ಠುರವಾಗಿ ಹೇಳಿದನು-ಆಗ ನಾಯಕರು ಹೇಗಾದರೂ ಒಂದು ಸಾರಿ ಈ ಪೀಡೆ ತೊಲಗಲಿ ಎಂದು ಎರಡು ಹೇರು ಸವಕಲು ನಾಣ್ಯಗಳನ್ನು ಮುಂದೆ ಸುರಿಸಿ, 'ಇದರಲ್ಲಿ ಒಂದು ನಾಣ್ಯ ವನ್ನು ಆರಿಸಿಕೊಳ್ಳಬಹುದು' ಎಂದರು.

ಕಪಟನಾಟಕ ಸೂತ್ರಧಾರಿಯಾದ ಮಾಯಾಬ್ರಾಹ್ಮಣನು 'ಬೇಡ ಬೇಡ! ಆ ದುಡ್ಡು ನಿಮಗೇ ಇರಲಿ' ಎಂದೆಂದು ಅಲ್ಲಿಂದ ಹೊರಟನು. ಇಷ್ಟಾದರೂ ಆರು ತಿಂಗಳಿಂದಲೂ ಅಂಡಲೆದು ಅಂಗಲಾಚಿ ಯಾಚಿಸಿ ಬ್ರಾಹ್ಮಣನು ಬರಿಗೈಯ್ಯಲ್ಲಿ ಹೋದನಲ್ಲಾ ಎಂದು ಸ್ವಲ್ಪವಾದರೂ ನಾಯಕರಿಗೆ ಪಶ್ಚಾತ್ತಾಪ ಉಂಟಾಗಲಿಲ್ಲ.

ಅಲ್ಲಿಂದ ಹೊರಟ ಬ್ರಾಹ್ಮಣರೂಪಿಯಾದ ಪರಮಾತ್ಮನು ಅಂಗಡಿಯ ಹಿಂಭಾಗವಲ್ಲಿದ್ದ ನಾಯಕರ ಮನೆಗೆ ಹೋಗಿ ಅವರ ಪತ್ನಿಯನ್ನು ಕಂಡನು.

ದೇವ ಬ್ರಾಹ್ಮಣರಲ್ಲಿ ಭಕ್ತಿಯುಳ್ಳ ಆಕೆಯು ನಮಸ್ಕರಿಸಿ ವಿಶ್ರಮಿಸಿ ಕೊಳ್ಳಬೇಕೆಂದು ವಿನಯೋಕ್ತಿಯಿಂದ ಉಪಚರಿಸಿ'ದಯಮಾಡಿಸಿದ ಕಾರಣ ವೇನೆ'ಂದು ಕೇಳಿದಳು. ಈ ಬ್ರಾಹ್ಮಣನು ತಾನು ಬಂದ ಉದ್ದೇಶವನ್ನು ತಿಳಿಸಿದನು; ಆಗ ಸಾಧ್ವಿಯು 'ಸ್ವಾಮಿ! ತಾವು ನಡೆಸಬೇಕಾದುದೇನೋ ಅತ್ಯವಶ್ಯವಾದ ಮಂಗಳಕಾರ್ಯ. ಆದರೆ ಇಂತಹ ಪುಣ್ಯ ಕಾರ್ಯಕ್ಕೆ ಸಹಾಯ ಮಾಡುವ ಯೋಗ್ಯತೆಯನ್ನು ನಾನು ಪಡೆದುಕೊಂಡು ಬರಲಿಲ್ಲ. ನಾನು ಅಸ್ವತಂತ್ರಳು,' ಎಂದಳು ಆಗ —

**ಬ್ರಾಹ್ಮಣ:**-ಅಮ್ಮಾ! ಶ್ರೀಹರಿಯು ನಿನಗೇನೂ ಕಡಿಮೆ ಮಾಡಿಲ್ಲ. ಇನ್ನು ಅಸ್ವತಂತ್ರಳೆಂದು ಹೇಳಿದೆಯಲ್ಲವೆ! ಶ್ರೀ ಹರಿಯೊಬ್ಬನಲ್ಲದೆ ಎಲ್ಲರೂ ಅಸ್ವತಂತ್ರರೇ!

**ಸರಸ್ವತಿ:**—ಸ್ವಾಮಿ! ಈ ಊರಲ್ಲಿ ರತ್ನಪಡಿ ವ್ಯಾಪಾರ ಮಾಡುವ ನಾಯಕರು ಆಗರ್ಭ ಶ್ರೀಮಂತರು, ಅವರಲ್ಲಿ ಹೋಗಿ ನೀವು ಯಾಚಿಸಲು ಸಹಾಯವಾಗುತ್ತಿತ್ತೋ ಏನೋ!

**ಬ್ರಾ:**—ಆ ಶ್ರೀನಿವಾಸ ನಾಯಕ ಅಹುದೋ ಅಲ್ಲವೋ! ಆ ಚಂಡಾಲನ ಹೆಸರೆತ್ತ ಬೇಡ—ಆರು ತಿಂಗಳಗಟ್ಟಲೆ ಅವನ ಅಂಗಡಿ ಬಾಗಿಲಿಗೆ ಅಂಡಲೆದು ಗೋಗರೆದು ಯಾಚಿಸಿದರೂ ಪಾಪಪುಣ್ಯಗಳ ಭಯವಿಲ್ಲದ ಕಡು ಲೋಭಿಯಾದ ಆತ ಯಾವ ಸಹಾಯವನ್ನೂ ಮಾಡದೆ ಛೀಮಾರಿ ಮಾಡಿ ಕಳುಹಿಸಿ ಬಿಟ್ಟ ನಾಸ್ತಿಕ ಶಿಖಾಮಣಿ. ಅವನ ಸ್ಮರಣೆ ಮಾಡಬಾರದು.

ಈ ಮಾತನ್ನು ಕೇಳಿದ ಸರಸ್ವತಿ ಬಾಯಿಗೆ ಮನಕರಗಿ ಕಣ್ಣಲ್ಲಿ ದಳ ದಳನೆ ನೀರು ಸುರಿಯಿತು, 'ಸ್ವಾಮಿ ಈಗ ತಾವು ಯಾರನ್ನು ದೂಷಿಸಿದಿರೋ ಅವರೇ ನಮ್ಮ ಯಜಮಾನರು. ಅವರನ್ನು ನಿಂದಿಸಬೇಡಿ. ನಿಮ್ಮಂಥವರ ಸೇವೆ ಮಾಡಲು ನನಗೆ ಭಾಗ್ಯವಿಲ್ಲ ಮಾಡುವುದೇನು? ಯತ್ನವಿಲ್ಲ;' ಅನ್ನಲು ಬ್ರಾಹ್ಮಣನು 'ಅಮ್ಮಾ ಮನಸ್ಸಿದ್ದರೆ ಮಾರ್ಗವಿದೆ! ಅದು ಹೇಗೂ ಇರಲಿ! ನೀನು ದಯಾಪರಳೆಂದು ಇಲ್ಲಿಗೆ ಬಂದಿರುತ್ತೇನೆ. ಈ ಪುಣ್ಯಕಾರ್ಯಕ್ಕೆ ಸಹಾಯಮಾಡಿ ಪುಣ್ಯಕಟ್ಟಿಕೊಳ್ಳುವ ಸುಯೋಗವು ನಿನಗೆ ವದಗಿದೆ. ಇಂತಹ ಸುಸಂದರ್ಭವನ್ನು ಕಳೆದುಕೊಳ್ಳಬೇಡ!'ಎನ್ನಲುಇದನ್ನು ಕೇಳಿಸರಸ್ವತೀ ಬಾಯಿಯು 'ನನಗೇನೋ ಮನಸ್ಸಿದೆ ಇದಕ್ಕೆ ಮಾರ್ಗವೇ ತೋರುವುದಿಲ್ಲ,' ಎನ್ನಲು 'ಬ್ರಾಹ್ಮಣನು ಹಾಗೆ ಮನಸ್ಸಿದ್ದರೆ ನಿನ್ನ ಮೂಗಿನಲ್ಲಿರುವ ಮೂಗುತಿಯನ್ನು ತೆಗೆದುಕೊಟ್ಟು ಪುಣ್ಯಭಾಗಿನಿಯಾಗು ಅನುಮಾನಿಸುವೆ ಏಕೆ?' ಎನ್ನಲು—

ಬಾಯಿಯವರು 'ಕೇಳುವವನು ವೃದ್ಧ ಬ್ರಾಹ್ಮಣ ಕೇಳುವುದೋ ಮಹಾಪುಣ್ಯಕಾರ್ಯಕ್ಕೆ ಇಲ್ಲವೆನ್ನಲಾರೆ,' ಎಂದು ಯೋಚಿಸಿದರು. ಅಷ್ಟರಲ್ಲಿ

ತಮ್ಮ ಪತಿಯ ಸ್ಮರಣೆ ಬರಲು ಭಯದಿಂದ ಮೈನಡುಗಿತು. ಹಾಗೆಯೇ ಯೋಚಿಸುತ್ತಾ 'ಏನಾದರಾಗಲಿ! ಯಜಮಾನರಿಂದ ಯಾವ ಶಿಕ್ಷೆಯಾದರೂ ಅನುಭವಿಸುತ್ತೇನೆ ಕೊನೆಗೆ ಈ ಪುಣ್ಯ ಕಾರ್ಯಕ್ಕಾಗಿ ನನ್ನ ಪ್ರಾಣವನ್ನೇ ಅರ್ಪಿಸುತ್ತೇನೆ', ಎಂಬ ನಿರ್ಧಾರಕ್ಕೆ ಮುಟ್ಟಿ ಮೂಗುತಿಯನ್ನು ತೆಗೆದು ಬ್ರಾಹ್ಮಣನ ಕೈಯಲ್ಲಿಟ್ಟು 'ಕೃಷ್ಣಾರ್ಪಣ'ವೆಂದರು. ಈ ಬ್ರಾಹ್ಮಣನು— 'ಬಹು ಭಾಗ್ಯವಂತೆ, ಪುಣ್ಯಶಾಲಿನಿ, ಶ್ರೀಹರಿ ಪ್ರೀತನಾದನು' ಎಂದು ಹೇಳಿ ಹಸನ್ಮುಖಿಯಾಗಿ ಹೊರಟುಹೋದನು.

ಇಲ್ಲಿಂದ ಹೊರಟ ಬ್ರಾಹ್ಮಣನು ಪುನಃ ನಾಯಕರ ಅಂಗಡಿಗೆ ಬಂದನು. ನಾಯಕರು 'ಪುನರಾಯಾನ್ಮಹಾ ಕಪಿಃ' ಎಂದುಕೊಂಡು ಕೇಳಿಯೂ ಕೇಳಿಸದ ಹಾಗೆ 'ಮತ್ತೆ ಈ ಪ್ರಾರಬ್ಧ ಬಂತಲ್ಲ' ಎಂದರು. ಆಗ ಬ್ರಾಹ್ಮಣನು 'ನಾಯಕರೇ! ನೀವು ಹೆದರಬೇಕಾದುದಿಲ್ಲ, ನಿಮ್ಮಲ್ಲಿ ಈಗ ಯಾಚನೆಗಾಗಿ ಬರಲಿಲ್ಲ, ಅಮೌಲ್ಯವಾದ ಒಂದು ಒಡವೆಯನ್ನು ಒತ್ತೆಯಿಡಲು ಬಂದಿರುವೆನು'; ಅನ್ನಲು ನಾಯಕರು ಹಸನ್ಮುಖಿಗಳಾಗಿ 'ದಯಮಾಡಿಸಿ! ದಯಮಾಡಿಸಿ! ಎಲ್ಲಿ ಆ ಒಡವೆಯಾವುದು? ನೋಡೋಣ' ಎಂದರು-ಬ್ರಾಹ್ಮಣನು ಮೂಗುತಿಯನ್ನು ನಾಯಕರ ಕೈಯಲ್ಲಿಕೊಡಲು ಅದನ್ನು ಕಂಡಕೂಡಲೇ ರತ್ನ ಪರೀಕ್ಷಾ ನಿಪುಣರಾದ ನಾಯಕರು ಸಂಶಯಪಟ್ಟು ಮೂಗುತಿಯನ್ನೂ ಬ್ರಾಹ್ಮಣನ ಮುಖವನ್ನೂ ತಿರುತಿರುಗಿ ನೋಡಿದರು. ಆಗ ಬ್ರಾಹ್ಮಣನು 'ಏನು ನಾಯಕರೇ! ಬಹು ಪರೀಕ್ಷಿಸು ತ್ತೀರಿ! ನಿಮಗೇನೋ ಸಂಶಯವಾದಂತೆ ತೋರುವುದು!' ಎನ್ನಲು 'ಮತ್ತೇನಿಲ್ಲ ಇಂತಹದೇ ಮೂಗುತಿಯೊಂದು ನಮ್ಮಲ್ಲಿದೆ. ಆ ಮೂಗು ತಿಯು ಇದೇ ಇರಬಾರದೇಕೆ? ಎಂಬ ಯೋಚನೆ. ಅದಕ್ಕಾಗಿ ನೋಡಿದೆ ಅಷ್ಟೇ! ಈ ಮೂಗುತಿ ಎಲ್ಲಿತ್ತು?' ಎನ್ನಲು, ನಾಯಕರ ಮಾತನ್ನು ಕೇಳಿ ಬ್ರಾಹ್ಮಣನು ಮನದೊಳಗೆ ನಕ್ಕು 'ನಾಯಕರೇ ಇದನ್ನೇನು ಕದ್ದು ತಂದಿಲ್ಲ. ಒತ್ತೆಯಿಟ್ಟುಕೊಂಡು ಹಣಕೊಡುವುದಾದರೆ ಕೊಡಿ ನಮಗೂ ಬೇರೆ ಕೆಲಸ ವಿದೆ! ನಿಮಗಾಗದಿದ್ದರೆ ಬೇರೆಲ್ಲಾದರೂ ಹೋಗುವೆವು' ಎನ್ನಲು ಇಂತಹ ಅಮೂಲ್ಯವಾದ ಒಡವೆಯನ್ನು ಬಿಡಲಾರದ ನಾಯಕರು 'ಇದರ ಮೇಲೆ

ಗುರುಚರಣದರ್ಶನ ಯಾವಾಗ ಲಭಿಸುವುದೋ ಎಂಬುವ ಲವಲವಿಕೆಯಿಂದ ನಾಯಕರು ಬರುತ್ತಿದ್ದರು—ವ್ಯಾಸ ರಾಯರೂ ಯಾವಾಗ ಸಚ್ಛಿಷ್ಯನು ಲಭಿಸುವನೋ ಅಂತ ಹಾದಿನೋಡುತ್ತಿದ್ದರು.

ನಾಯಕರಿಗೆ ವ್ಯಾಸರಾಯರು ಪೂರ್ವ ಪರಿಚಿತರೆ. ವಿಜಯನಗರಾಧೀಶರೆಡೆಗೆ ಹಲವು ಬಾರಿ ವ್ಯಾಪಾರದ ನಿಮಿತ್ತ ನಾಯಕರು ಬಂದಿದ್ದರೂ ಕಣ್ಣೆತ್ತಿ ಅಲ್ಲೇ ಇದ್ದ ವ್ಯಾಸರಾಯರನ್ನು ಕಂಡವರಲ್ಲ. ಕಾರಣ ಅವರ ಹತ್ತಿರ ಇವರಿಗೆ ಆಗ ಯಾವ ವ್ಯಾಪಾರವೂ ಇರಲಿಲ್ಲ. ಯಾರೋ ಭಿಕ್ಷುಗಳೆಂದು ಉದಾಸೀನ ತಳೆದಿದ್ದರು. ಆಗ ವ್ಯಾಸರಾಯರನ್ನು ಕಂಡು ಮಾತನಾಡಿಸಿದರೆ ಅಥವಾ ಅವರೇ ತಮ್ಮನ್ನು ಕಂಡರೂ ಎಲ್ಲಿ ದ್ರವ್ಯಕ್ಕೆ ಸಂಚಕಾರ ಬರುವುದೋ ಎಂಬ ಭಯದಿಂದ ತಾವು ಬಂದಕೆಲಸ ಮಾಡಿಕೊಂಡು ಹೊರಟು ಬಿಡುತ್ತಿದ್ದರು. ಆದರೂ ದೂರದಿಂದ ಯತಿಗಳ ಶಿರೋರತುನರಾದ ವ್ಯಾಸರಾಯರನ್ನು ಕಂಡಿದ್ದರು.

ಈಗ ಮಾತ್ರ ಚಕ್ರತೀರ್ಥದಲ್ಲಿ ವ್ಯಾಸರಾಯರನ್ನು ಕಂಡು ದೂರದಿಂದಲೇ ಹೆಜ್ಜೆ ನಮಸ್ಕಾರ ಹಾಕುತ್ತಾ ಸಮೀಪಕ್ಕೆ ಬಂದು 'ಶ್ರೀ ಗುರುಭ್ಯೋ ನಮಃ' ಎಂದು ದಂಡ ಪ್ರಣಾಮ ಮಾಡಿದರು. ವ್ಯಾಸರಾಯರು ಅತ್ಯಾನಂದದಿಂದ ನಾಯಕರೆರಡು ಭುಜಗಳನ್ನು ಹಿಡಿದು ಮೇಲೆತ್ತಿ 'ಪರಮ ಸಂತೋಷವಾಯ್ತು' ಎಂದು ಉಪಚರಿಸಿದರು.

ಆ ದಿವಸ ಮಧ್ಯಾಹ್ನ ತಮ್ಮ ಸಂಸ್ಥಾನದ ಪೂಜಾಮುಗಿಸಿ ಸುದರ್ಶನ ಹೋಮ ಮಾಡಿಸಿ ನಾಯಕರಿಗೂ ಅವರ ಪತ್ನೀಪುತ್ರರಿಗೂ ತಪ್ತಮುದ್ರಾಂಕನದಿಂದ ವೈಷ್ಣವ ದೀಕ್ಷೆಯನ್ನಿತ್ತು, ಶ್ರೀಯಂತ್ರೋದ್ಧಾರಕ ಪ್ರಾಣರಾಯನ ಸನ್ನಿಧಿಯಲ್ಲಿ ಶ್ರೀನಿವಾಸ ನಾಯಕರಿಗೆ ಮಂತ್ರೋಪದೇಶಮಾಡಿ **'ಪುರಂದರ ವಿಠಲ'** ಎಂಬ ಅಂಕಿತವಿತ್ತು § ಶ್ರೀಹರಿದಾಸ ಸಾಮ್ರಾಜ್ಯಾಭಿ**ಷಿಕ್ತ**ರನ್ನಾಗಿ ಮಾಡಿ 'ನೀವು ಇಂದಿಗೆ **ಹರಿದಾಸ ಪಟ್ಟಭದ್ರರಾದಿರಿ, ಸುಜೀವರುಗಳ ಉದ್ಧಾರದ ಮಾರ್ಗದರ್ಶಕರಾಗಿ ಹರಿದಾಸ ಪಂಕ್ತಿ**

---

§ ಶ್ರೀ ಮಧ್ವಾಚಾರ್ಯರ ಮತ ಸಂಪ್ರದಾಯದಂತೆ ಸದ್ಗುರುಗಳಲ್ಲಿ ಶಾಂತಿ ಪಾಠ (ಸಚ್ಛಾಸ್ತ್ರ ಶ್ರವಣ) ದ್ವಾರಾ ಜ್ಞಾನಿಯಾಗಿ ಉದ್ಧಾರದ ಮಾರ್ಗವನ್ನು ತಿಳಿ

**ಯಲ್ಲಿ ನಿಮ್ಮ ನಾಮವು ಪುರಂದರದಾಸರು' ಎಂದು ಅಮರವಾಗು ವಂತೆ ಶ್ರೀಗೋಪಾಲಕೃಷ್ಣನೂ ಯಂತ್ರೋದ್ಧಾರಕ ಪ್ರಾಣರಾ ಯನೂ ಅನುಗ್ರಹಿಸುವರು'** ಈ ಪ್ರಕಾರ ಹರಸಿದರು.

ನಾಯಕರು 'ಪರಮಾನುಗ್ರಹ! ಮಹದಾಜ್ಞಾ! ಮಹದಾಜ್ಞಾ!' ಎಂದು ಗಂಟಲಶಿರೆ ಉಬ್ಬಿದವರಾಗಿ ಆನಂದಬಾಷ್ಪಪರಿಪೂರಿತರಾಗಿ ಕೈಜೋ ಡಿಸಿ ನಿಂತಿದ್ದರು. ಶ್ರೀನಿವಾಸ ನಾಯಕರು ಇಂದು ಪುರಂದರದಾಸ ರಾದರು.

ಪುರಂದರದಾಸರು ಗುರುಗಳೆದುರು ದೇವರ ಸಮ್ಮುಖದಲ್ಲಿ ನಿಂತು ಗುರೂಪದೇಶದಿಂದ ಸಿದ್ಧಿಯನ್ನು ಹೊಂದಿದ ವರಕವಿಗಳಾಗಿ ಈ ಕೆಳಕಂಡ ಉಗಾಭೋಗವನ್ನು ಪ್ರಥಮತಃ ಹಾಡಿ ಪುರಂದರ ವಿಠಲನಿಗರ್ಪಿಸಿದರು.

---

ದುಕೊಳ್ಳುವದೊಂದು. ಮತ್ತೊಂದು ವಿಧಾನ, ಹರಿದಾಸ ಕೂಟ ಸಂಪ್ರದಾಯ ದಂತೆ ಸದ್ಗುರುಗಳಿಂದ ಅಂಕಿತ ಪಡೆಯುವುದು. ಶಾಂತಿಪಾಠವಾದವರೂ ಅಂಕಿತ ಪಡೆಯಬಹುದು. ಸಚ್ಛಾಸ್ತ್ರವನ್ನೇ ದಾಸರುಗಳು ಕನ್ನಡದಲ್ಲಿ ಹಾಡಿ ರುವರು. ಇನ್ನೂ ಶ್ರೀ ಹರಿದಾಸ ಸಾಹಿತ್ಯದ್ವಾರಾ ಜ್ಞಾನಿಯಾಗಿ ಉದ್ಧಾರದ ಮಾರ್ಗವನ್ನು ಕಂಡುಕೊಳ್ಳುವುದು ಸುಲಭಮಾರ್ಗ.

"ಅಂಕಿತ"ವೆಂದರೆ ಪ್ರತಿಜೀವರಲ್ಲಿಯೂ ಬಿಂಬರೂಪಿಯಾದ ಪರಮಾತ್ಮನು ಬೇರೆ ಬೇರೆ ನಾಮಗಳಿಂದ ಕರೆಸಿಕೊಂಡು ಸ್ಥಿತನಾಗಿರುವನು. ಗುರುಗಳು ಶಿಷ್ಯ ನಿಗೆ ಬಿಂಬರೂಪೀ ಪರಮಾತ್ಮನ ನಾಮ ನಿರ್ದೇಶದಿಂದ ಅಂಕಿತವನ್ನನುಗ್ರಹಿಸಿ ಬಿಂಬೋಪಾಸನೆಯಿಂದ ಬಿಂಬರೂಪೀ ಪರಮಾತ್ಮನ ದರ್ಶನಾನಂದಭಾಗಿಯಾ ಗುವ ಮಾರ್ಗವನ್ನು ತೋರಿಸೋಣವು. ಗುರುಗಳಿಂದ ಅಂಕಿತಪಡೆದ ನಂತರ ದಲ್ಲಿ ಪಾಲಿಸಬೇಕಾದ ನಿಯಮಗಳನ್ನು ಸರ್ವಥಾ ತಪ್ಪಕೂಡದು.

ಎಲ್ಲಕ್ಕಿಂತಲೂ ಮುಖ್ಯವಾಗಿ ಅಂಕಿತವಿತ್ತ ಗುರುಗಳ ವಿಷಯದಲ್ಲಿ ಯಾವ ಕಾಲದಲ್ಲಿಯೂ ಯಾವ ನೆಪದಿಂದಲೂ ಅಪಿಶ್ವಾಸ ಅಶ್ರದ್ಧೆಗಳನ್ನು ತೋರ ಬಾರದು. ನಾವು ಮಾಡುವ ಸಕಲಕರ್ಮಗಳನ್ನು ಗುರುದ್ವಾರಾ ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಹರಿಯ ಚರಣಾರವಿಂದಗಳಿ ಗರ್ಪಿಸಬೇಕು. ಅಂಕಿತವನ್ನು ಕೊಡುವಾಗ ದಂಡಿಗೆ ಬೆತ್ತಗಳನ್ನು ಕೊಡುವುದೇ

ನೀರಿಲ್ಲದ ಭಾವಿ ಗುರುವಿಲ್ಲದ ಮಠವು—
ನೆರಳಿಲ್ಲದ ಮರವು ಫಲವಿಲ್ಲದ ಲತೆ
ಧನವಿಲ್ಲದ ದಾತ ದಯವಿಲ್ಲದ ನಾಥ
ಮನಸಿಲ್ಲದ ಶಕುತಿ ಭಯವಿಲ್ಲದ ಭಕುತಿ
ನರಹರಿ ಶ್ರೀಕೃಷ್ಣ ಮುಕುಂದ ಎನ್ನದ
ನರರಿದ್ದು ಫಲವೇನು ಇಲ್ಲದಿದ್ದರೆ ಏನು?

ಹೀಗೆ ಹಾಡಿರುವರು.

## ನಿರ್ಮಲ ಭಕ್ತಿ

ನಿರ್ಮಲಭಕ್ತಿಯೇ ಮಹಾ ಫಲಪ್ರದವೆಂಬುದಕ್ಕೆ ದಾಸರಾಯರ ಕೊನೆಯಮಗನಾದ ಮಧ್ವಪತಿಯ ಜೀವನ ಚರಿತ್ರೆಯಲ್ಲಿ ನಡೆದ ಒಂದು ಸಂಗತಿಯು ಅತಿ ಮಹತ್ವದ್ದಾಗಿದೆ.

ದಾಸರಿಗೆ ವರದಪ್ಪ, ಗುರಪ್ಪ, ಅಭಿನವಪ್ಪ, ಮಧ್ವಪತಿ ಇವರು ನಾಲ್ವರು ಗಂಡುಮಕ್ಕಳೂ ಒಬ್ಬ ಹೆಣ್ಣು ಮಗಳೂ ಇದ್ದರೆಂದು ತಿಳಿದು ಬರುತ್ತದೆ.

ದಾಸರು ಹಂಪೆಯಲ್ಲಿರುವಾಗ ನಿತ್ಯವೂ ಅಲ್ಲಿರುತ್ತಿದ್ದ ಪ್ರಾಣರಾಯನನ್ನು ಪೂಜಿಸುತಿದ್ದರು. ಒಂದು ದಿವಸ 'ಈ ದಿವಸ ಮಧ್ವಪತಿಯೇ ಪ್ರಾಣದೇವರ ಪೂಜೆಮಾಡಿ ಬರಲಿ' ಎಂದು ತಮ್ಮ ಧರ್ಮಪತ್ನಿಯ ಮುಂದೆ ಹೇಳಿ ತಾವು ಎಂದಿನಂತೆ ಗೋಪಾಳಕ್ಕೆ ಹೊರಟರು.

ಸರಸ್ವತೀ ಬಾಯಿಯು ಮಗನನ್ನು ಕರೆದು 'ಮಧ್ವಪತಿ! ಈ ದಿವಸ ಪ್ರಾಣದೇವರ ಪೂಜೆಯನ್ನು ನೀನೇ ಮಾಡಿ ನೈವೇದ್ಯ ಸಮರ್ಪಣ ಮಾಡಿ ಬಾ' ಎನ್ನಲು—ಮಧ್ವಪತಿಯು ಪೂಜೋಪಕರಣಗಳನ್ನೆಲ್ಲಾ ತೆಗೆದು ಕೊಂಡು ದೇವರ ಗುಡಿಗೆ ಬಂದನು-ತಾಯಿ ಹೇಳಿದಂತೆ ದೇವರ ಮೂರ್ತಿಗೆ ಅಭಿಷೇಕಾದಿಗಳನ್ನು ಮುಗಿಸಿ ತನಗೆ ತಿಳಿದಂತೆ ಗಂಧಾಕ್ಷತೆ ತುಳಸೀ ಪುಷ್ಪಾದಿಗಳಿಂದ ಅಲಂಕರಿಸಿ ನೈವೇದ್ಯದ ಪಾತ್ರೆಯನ್ನು ಹನುಮಂತ ದೇವರ ಮುಖದ ಹತ್ತಿರ ಹಿಡಿದು 'ಹನುಮಪ್ಪ! ಊಟಮಾಡೋ!' ಎಂದನು.

ಶಿಲಾ ಮೂರ್ತಿಯು ಉಣ್ಣುವುದುಂಟೇ? ತಿಳಿಯದ ಬಾಲಕನು ಪುನಃ, 'ಬೇಗ ಊಟಮಾಡೋ! ಬೇಗ ಊಟಮಾಡು! ಮಹರಾಯಾ! ಹೊತ್ತಾಯಿತು, ನಾನು ಮನೆಗೆ ಹೋಗಬೇಕು; ನನಗೂ ಹಸಿವಾಗುವುದು;' ಎಂದಾಗಲೂ ಮೂರ್ತಿಯು ಬಾಯಿ ಬಿಡಲಿಲ್ಲ, ಆಗ ಹುಡುಗನು 'ಏನು ಊಟ ಮಾಡುವಿಯೋ ಇಲ್ಲವೋ' ಅಪ್ಪ—ಅಮ್ಮನಿಂದ ನನ್ನನ್ನು ಬೈಸುವಿಯೋ, ನನ್ನ ತಂದೆ ಬಂದಾಗ ಮಾತ್ರ ಊಟಮಾಡುತ್ತಿದ್ದು ನಾನು ಹುಡುಗನೆಂದು ಹಟಮಾಡುತ್ತಿರುವೆಯಾ? ಒಳ್ಳೇ ಮಾತಿನಲ್ಲಿ ಊಟಮಾಡಿದರೆ ಸರಿ ಇಲ್ಲವಾದರೆ ಇದೋ ನಿನ್ನ ಕಾಲಬುಡದಲ್ಲಿ ತಲೆಯೊಡೆದುಕೊಂಡು ಪ್ರಾಣವನ್ನು ಬಿಡುವೆನು;' ಎಂದಂದು ತನ್ನ ತಲೆಯನ್ನು ಘಟ್ಟಿಸಲು ಸಿದ್ಧನಾದನು. ಆಗ ಶಿಲಾಂತರ್ಯಾಮಿಯಾದ ಶ್ರೀ ಪ್ರಾಣರಾಯನು ಈ ಬಾಲಕನ ನಿರ್ಮಲವಾದ ಪ್ರೇಮ ಪಾಶಕ್ಕೆ ಕಟ್ಟುಬಿದ್ದು ಪ್ರಸನ್ನನಾಗಿ—ಖಂಡಿತವಾಗಿಯೂ ಈ ಬಾಲಕನು ತನ್ನ ಪ್ರಾಣವನ್ನೇ ಕಳೆದುಕೊಳ್ಳುವನೆಂದು ಆತನ ಮುಗ್ಧ ಪ್ರೇಮಕ್ಕೆ ತಲೆದೂಗಿ ಬಾಯಿ ತೆರೆದನು. ಬಾಲಕನು ಬಹು ಸಂತೋಷದಿಂದ ತುತ್ತುಗಳನ್ನು ಮಾಡಿ ಬಾಯೊಳಗೆ ತುರುಕಿದನು. ತಂದ ಅನ್ನವೆಲ್ಲಾ ಮುಗಿಯಿತು. ಆಗ ಮಧ್ವಪತಿಯು—'ಏನಪ್ಪ ಹನುಮಪ್ಪ ತೃಪ್ತಿಯಾಯಿತೇ! ಇಷ್ಟು ಮೊಂಡತನ ಮಾಡದೇ ಮೊದಲೇ ಉಂಡಿದ್ದರೆ ನಿಮ್ಮಪ್ಪನ ಗಂಟೇನು ಖರ್ಚಾಗುತ್ತಿತ್ತು? 'ತುಡುವೂ ಬಿಡದು § ಶಡವೂ ಬಿಡದು' ಎಂಬಂತೆ ಹಸಿದಿದ್ದರೂ ಹಟಮಾಡಿದೆ! ಆದರೆ ನಾನೇನು ಸೋಲುವವನಲ್ಲ ಆಗಲಿ! ಹೋಗಿಬರುತ್ತೇನೆ ಹನುಮಪ್ಪ! ಇದೋ ನಿನಗೆ ನಮಸ್ಕಾರ! ಎಷ್ಟು ಮೊಂಡತನವೋ ನಿನಗೆ ನಾಳೆ ಬರಿಯ ಅನ್ನವಲ್ಲ ಉಪ್ಪಿನಕಾಯಿನೂ ತರ್ತೀನಿ. ಇಂದಿನಂತೆ ಹಟಮಾಡಬೇಡ ತಿಳಿಯಿತೇ' ಎಂದು ಮನೆಗೆ ಬಂದನು.

ದಾಸರು ಮಧ್ಯಾಹ್ನಕಾಲದಲ್ಲಿ ಭೋಜನಕ್ಕೆ ಕುಳಿತುಕೊಳ್ಳುವಾಗ 'ಎಲ್ಲಿ ಪ್ರಾಣದೇವರ ಪ್ರಸಾದ ಮರೆತುಬಿಟ್ಟೆಯಾ!' ಎನ್ನಲು ಸರಸ್ವತೀ ಬಾಯಿಯವರು 'ಮಧ್ವಪತಿ ಎಲ್ಲಿಟ್ಟೆಯಪ್ಪಾ?' ಎಂದು ಮಗನನ್ನು ಕೇಳಲು,

§ ಶಡವು—ಅಂದರೆ ಜಂಬ, ಅಹಂಕಾರ.

**ಮಧ್ವಪತಿ:**— ಏನಿದೆಯಮ್ಮ ಬರಿಯ ಪಾತ್ರೆ!

**ಸರಸ್ವತೀಬಾಯಿ:**—ಹಾಗಂದರೇನೋ?

**ದಾಸರು:**—ಏನು ಮಾಡಿದೆಯೋ?

**ಮ:**—ನಾನೇನೂ ಮಾಡಿಲ್ಲಮ್ಮ. ಆ ಹನುಮಪ್ಪನಿಗೆ ತುಂಬಾ ಹಸಿವಾಗಿತ್ತು ಅಂತ ಕಾಣುತ್ತೆ. ಮೊದಲು ಮೊದಲು ಬಹಳ ಹಟಮಾಡಿತು. ನಾನು ಚೆನ್ನಾಗಿ ಗದರಿಸಿ ಬೈದ ಮೇಲೆ ಒಂದಗಳು ಬಿಡದಂತೆ ಹೊಡಿಯಿತು; ಅಮ್ಮಾ ನೀನು ನನ್ನೇಜಗ ಮೊಂಡಾ ಅಂತಿ. ಆ ಹನುಮಪ್ಪ ನನಗಿಂತ ಮೊಂಡು, ಅಲ್ಲವಮ್ಮಾ ಬರೀ ಅನ್ನ ಕಳಿಸಿದಿಯಲ್ಲ ಆ ಹನುಮ್ಯಾನಾದ್ರೂ ಹ್ಯಾಂಗ ತಿನಬೇಕಮ್ಮ. ಒಂದು ಉಪ್ಪಿನಕಾಯೇ ಮೊಸರೇ ತುಪ್ಪವೇ ಏನೂ ಕಳಿಸ್ಬೇಡ್ವೇ. ಅಮ್ಮಾ ನಾಳೆಯಿಂದ ಸ್ವಲ್ಪ ಉಪ್ಪಿನಕಾಯಿನ್ನಾದ್ರೂ ಜತೇಲಿಡಮ್ಮಾ ಅಂ?

ದಾಸದಂಪತಿಗಳು ಆಶ್ಚರ್ಯ ಚಕಿತರಾಗಿ—

**ದಾಸರು:**— ಅಂತೂ ಹನುಮಪ್ಪ ತಿಂದ ಅನ್ನ

**ಮ:**—ತಿನ್ನದಿದ್ದರೆ ನಾನು ಬಿಟ್ಟೇನೇ?, ನಾನು ಅವನಿಗಿಂತಲೂ ಮೊಂಡ!

**ದಾಸರು:**—ಅವನೇ ಸೋತ ಅನ್ನು

**ಮ:**—ನಾನ್ಯಾಕೆ ಸೋತೇನು. ತಿನ್ತೀಯೋ ತಲೆಘಟ್ಟಿಸಿಕೊಂಡು ನಿನ್ನ ಕಾಲ್ಬುಡಕ್ಕೆ ಪ್ರಾಣ ಒಪ್ಪಿಸಿ ಬಿಡ್ಲೋ ಅಂದು ತಲೆ ಘಟ್ಟಿಸಿಕೊಳ್ಳುವಷ್ಟರಲ್ಲಿ ಹನುಮಪ್ಪ ಬಾಯಿಕಳೀತು. ಒಂದೊಂದೇ ತುತ್ತು ಬಾಯಿಗ್ತುರುಕಿದೆ, ಆವಾಗೆಲ್ಲಾ ತಿಂತು.

ಮಧ್ವಪತಿಯ ಮಾತಿಗೆ ಎಲ್ಲರೂ ನಕ್ಕರು. ಮಧ್ವಪತಿಗೆ ಅಳು ಬಂತು—

**ದಾಸರು:**—ಅವರೆಲ್ಲ ನಕ್ಕರೆ ನಗಲಿ ದಡ್ಡರು; ನೀನು ಜಾಣಪ್ಪ; ಅದಿರಲಿ ನಾಳೇನೂ ನೀನೇ ಪೂಜೆ ಮಾಡಪ್ಪ; ನಾನೂ ಜತೇಲಿ ಬರ್ತೀನಿ. ಈಗ ನಕ್ಕವರೂ ಬರ್ಲಿ. ಹನುಮಪ್ಪನಿಗೆ ಉಣಿಸಿಬಿಡು! ನಾನು ಕಣ್ತುಂಬ ನೋಡಿ ಬಿಡುತ್ತೇನೆ. ಈ ನಕ್ಕವರಿಗೆಲ್ಲಾ ಆಗ ಮೂಗು ಕೊಯ್ದಂತಾಗುತ್ತೆ—ಎಂದರು. ಮಧ್ವಪತಿಗೆ ಸ್ವಲ್ಪ ಸಮಾಧಾನವಾಯ್ತು.

ಮಾರನೆಯ ದಿನ ಮಧ್ವಪತಿಯು ತಂದೆಯೊಂದಿಗೆ ಗುಡಿಗೆ ಬಂದನು. ಅವನದೇ ಆದ ಒಂದು ವಿಶಿಷ್ಟರೀತಿಯಿಂದ ಅಭಿಷೇಕಾದಿಗಳನ್ನು ಮಾಡಿದ. ತಂದ ಹೂವು ತುಳಸಿಯನ್ನೆಲ್ಲಾ 'ಹನುಮಪ್ಪನೇ ನಿನಗೆ ನಮಸ್ಕಾರ!' ಎಂದು ದೇವರ ವಿಗ್ರಹದ ಮೇಲೆಸೆದು 'ಊಟಮಾಡೋ' ಎಂದಾಗ ವಿಗ್ರಹವು ಬಾಯಿಬಿಡಲಿಲ್ಲ. ಮತ್ತೊಮ್ಮೆ 'ಬಾಯಿ ಬಿಡೋ ಮೊಂಡ! ಬರಿಯ ಅನ್ನವಲ್ಲ ಚಲೋ ಉಪ್ಪಿನಕಾಯೂ ಇದೆ ಹೂಂ ಬೇಗ' ಎಂದರೂ ಮಾರುತಿಯ ವಿಗ್ರಹವು ಬಾಯಿಕಳೆಯದಿರಲು 'ನಮ್ಮಪ್ಪನೆದುರು ನನ್ನ ಸುಳ್ಳುಗಾರನೆನಿಸುವಿಯಾ? ತುಡುವೂ ಬಿಡದು ಶಡವೂ ಬಿಡದು ಎಂದಾಯಿತಲ್ಲ ನಿನ್ನ ಹಣೇಬರಹ, ಸಾಕು ಅತಿಮಾಡಬೇಡ ಬಾಯಿಕಳೆಯುವಿಯೋ ತಲೆ ಘಟ್ಟಿಸಿಕೊಳ್ಳಲೋ' ಎಂದಾಕ್ಷಣ ದೇವರು ಬಾಯಿಕಳೆದರು. ಪೂಜಾಪ್ರಕಾರವನ್ನು ನೋಡುತ್ತಿದ್ದ ದಾಸರು ಬೆರಗಾದರು. ಮಧ್ವಪತಿಯು ದೇವರಿಗೆ ಭೋಜನ ಮಾಡಿಸಿಯೇ ಬಿಟ್ಟನು. ದಾಸರಿಗೆ ರೋಮಾಂಚನವಾಯ್ತು. ಆನಂದ ಬಾಷ್ಪವನ್ನು ಸುರಿಸುತ್ತಾ 'ಪ್ರಾಣರಾಯ ನಿನ್ನ ಸ್ವಾಮಿಯಂತೆ ನೀನೂ ಭಕ್ತ ಪರಾಧೀನನೆಂಬುದು ಪ್ರತ್ಯಕ್ಷವಾಯ್ತು. ಬೇಡತಿಗೆ ಸ್ವಾಮಿಯೊಲಿದ. ಬಾಲಕನಿಗೆ ನೀನೊಲಿದೆ. ಅರಸಿನಂತೆ ಬಂಟನಲ್ಲವೆ?' ಎಂಬುದಾಗಿ ಪ್ರಾಣ ದೇವರನ್ನು ಬಹುವಿಧವಾಗಿ ಸ್ತುತಿಸಿ ಅನಂತ ಪ್ರಣಾಮಗಳನ್ನರ್ಪಿಸಿ ಮಗನ ತಲೆಯ ಮೇಲೆ ಕೈಯ್ಯಿಟ್ಟು 'ಮಧ್ವಪತಿ ನೀನು ಧನ್ಯನಪ್ಪಾ! ಮುಖ್ಯಪ್ರಾಣ ನಿನ್ನಲ್ಲಿ ಪ್ರಸನ್ನನಾದನು. ಇನ್ನು ಶ್ರೀ ಹರಿಯ ಪೂರ್ಣಾನುಗ್ರಹಕ್ಕೆ ನೀನು ಪಾತ್ರನಾಗುವುದು ನಿಶ್ಚಯವಪ್ಪ!' ಎಂಬುದಾಗಿ ಹರಸಿದರು. ಪುರಂದರ ದಾಸರ ಆಶೀರ್ವಾದದಿಂದ ಮಧ್ವಪತಿಗೆ ತನ್ನರಿವು ತನಗುಂಟಾಯ್ತು. ನಿರ್ಮಲಭಕ್ತಿಯೇ ಮುಕ್ತಿಗೆ ಸೋಪಾನವು.

ಹರಿಭಕ್ತರ ಚರಿತ್ರೆಗಳಲ್ಲಿ ಇಂತಹ ಪವಾಡಗಳನ್ನು ನಾವು ಕಾಣು ತ್ತೇವೆ. ಹರಿಭಕ್ತರ ಚರಿತ್ರೆಯಲ್ಲಿ ಮಾತ್ರವೇನು ಯಾವ ಪಂಥದವರ ಪ್ರವಾದಿಗಳ ಕಥೆಗಳಲ್ಲೂ ಇಂಥಾ ಪವಾಡಗಳು ಇದ್ದೇ ಇವೆ.

ಏಸುಕ್ರಿಸ್ತನು ಗೆಲಿಲಿಯಾದ ಕಾನಾ ಎಂಬ ಊರಿನಲ್ಲಿ ಆರು ಕಲ್ಲಿನ ಬಾನಿಗಳಲ್ಲಿ ತುಂಬಿಟ್ಟಿದ್ದ ನೀರನ್ನು ದ್ರಾಕ್ಷಾರಸವನ್ನಾಗಿ ಮಾಡಿದನಂತೆ.

ಕೋಳೂರ ಕೊಡುಗೂಸು ಎಂಬ ಬಾಲಿಕೆಯು ಲಿಂಗಕ್ಕೆ ಹಾಲು ಕುಡಿಸಿದಳಂತೆ. ಮಹಾರಾಷ್ಟ್ರ ಸಂತರಲ್ಲೊಬ್ಬನು ಹುಲಿಯ ಮೇಲೆ ಹತ್ತಿಕೊಂಡು ತಾನು ಹುಲಿಯನ್ನೂ ಸಾಧುಮಾರ್ಗಕ್ಕೆ ತಂದ ಸಾಧು ಪುರುಷನೆಂದು ಇನ್ನೊಬ್ಬ ಸಂತನ ಬಳಿಗೆ ತನ್ನ ಯೋಗ್ಯತೆಯನ್ನು ಪ್ರದರ್ಶಿ ಸಲು ಬಂದಾಗ ಮೋಟು ಗೋಡೆಯ ಮೇಲೆ ಕುಳಿತಿದ್ದ ಆ ಸಂತನು 'ಚಲೋ ಘೋಡಾ' ಎಂದು ಕುದುರೆಯ ಬೆನ್ನು ಚಪ್ಪರಿಸುವಂತೆ ಆ ಮೋಟು ಗೋಡೆಯನ್ನೇ ಚಪ್ಪರಿಸಲು ಆ ಗೋಡೆಯೇ ಕುದುರೆಯಂತೆ ಮುಂದೆ ಸಾಗಿತಂತೆ.

ಒಂದು ನಿಜ,ಒಂದು ಸುಳ್ಳೇ? ಎಲ್ಲವೂ ನಿಜ ಅಥವಾ ಎಲ್ಲವೂ ಸುಳ್ಳೇ? ನಂಬಿದವರಿಗೆಲ್ಲವೂ ನಿಜ. ನಂಬದವರಿಗೆಲ್ಲಾ ಸುಳ್ಳು. ಅದಕ್ಕೆ ಯಾರೂ ಕಾರಣರಲ್ಲ. ಆವರವರ ಭಾವನೆಯೇ ಕಾರಣವು.

ಕರ್ನಾಟಕ ಹರಿದಾಸರ ಯಾವ ಮಹಿಮೆಗಳಲ್ಲೂ ನಮಗಂತೂ ಏನೂ ಅತಿಶಯೋಕ್ತಿ ಕಾಣುವುದಿಲ್ಲ. ಕಲ್ಲುಮೂರ್ತಿಗೆ ಮಧ್ವಪತಿಯು ಉಣಿಸಿದನೆಂಬುದರಲ್ಲಿ ಸಂದೇಹವೇನು? ಏಕಾಗಬಾರದು?

## ದಾಸರೊಡನೆ ವಿಠಲನ ಸರಸ

ಶ್ರೀಹರಿಯು ಭಕ್ತರಲ್ಲಿ ಬಹು ಸರಸವಾಡುತ್ತಿರುವನು. ಹನುಮಂತ ನಿಗೆ ಸ್ವಾಮಿಯೆನಿಸಿದನು. ಅರ್ಜುನನಿಗೆ ಸಖನೆನಿಸಿದನು. ನಂದಯಶೋದೆ ಯರಿಗೆ ಪುತ್ರನೆನಿಸಿದನು. ಗೊಲ್ಲತಿಯರಿಗೆ ಪ್ರಿಯನೆನಿಸಿದನು. ಗೋವ ಳರಿಗೆ ಸಂಗಡಿಗನೆನಿಸಿದನು. ಪಾಂಡವರಿಗೆ ಬಂಧುವೆನಿಸಿದನು. ಹೀಗೆ

ಪರಮಾತ್ಮನ ಲೀಲೆಯು ಅತಿ ವಿಚಿತ್ರವಾದುದು. ಲೀಲಾಲೋಲನೆಂದೇ ಆ ಸ್ವಾಮಿಯು ಖ್ಯಾತನು. ರಮಾಬ್ರಹ್ಮಾದಿಗಳೇ ಶ್ರೀಹರಿಯ ಮಹಿಮೆ ಯನ್ನು ಸಂಪೂರ್ಣ ಅರಿಯರು, ವೇದಗಳಿಂದಲೂ ಸಾಕಲ್ಯೇನ ಅರಿಯಲು ಸಾಧ್ಯವಿಲ್ಲ ಎಂದಾದ ಮೇಲೆ ಅವಿರಳ ಮಹಿಮನ ಅನಂತ ಮಹಿಮೆಗಳನ್ನು ಎಷ್ಟು ವರ್ಣಿಸಿದರೆ ತಾನೇ ಮುಗಿದೀತು! ಅಥವಾ ಅವನ ಮಹಿಮಾಶ್ರವ ಣೇಚ್ಛುಗಳಿಗೆ ಸಾಕೆನಿಸೀತು! ಭಗವದ್ಭಕ್ತರಿಗೆ ಭಗವಂತನ ಮಹಿಮೆಗಳನ್ನು ಕೇಳಿದಷ್ಟೂ ಕೇಳಬೇಕೆಂಬ ಕುತೂಹಲವೂ ತುಂಬಿರುವುದು. ಭಗವದ್ಭಕ್ತ ರಲ್ಲಿ ಅಗ್ರಗಣ್ಯರಾದ ಶ್ರೀವ್ಯಾಸರಾಯರು—

'ದಾನಿಗಳರಸಂಗೆ ದೈನ್ಯವು ಬಲಿಯಲ್ಲಿ
ಕೈವಲ್ಯ ಪತಿಗೆ ದಾವಿನ ಬಂಧವ
ಲಕ್ಷ್ಮಿ ಪತಿಗೆ ಯಜ್ಞದೀಕ್ಷೆ ತಿರುಕೆ
ಲೋಕ ಗುರುವಿಂಗೆ ಪೊಕ್ಕಾಟ ಗೋಪೇರಲ್ಲಿ
ಈಸುವಿನೋದ ನಿನ್ನ ದಾಸರಿಗಾಗಿಯೆ
ಶ್ರೀಪತಿ ಶ್ರೀಕೃಷ್ಣ ನಿನ್ನ ದಾಸರಿಗಾಗಿಯೆ'

ಅಲ್ಲದೆ ಹರಿದಾಸ ಶ್ರೇಷ್ಠರಾದ ಶ್ರೀ ವಿಜಯದಾಸರು—

'ಭಕುತರಿಗಾಗಿ ನೀನು ಜಗವ ಪುಟ್ಟಿಸುವೆಯಯ್ಯ
ಭಕುತರಿಗಾಗಿ ನೀನು ಜಗವ ಸಲಹುವೆಯಯ್ಯ
ಭಕುತರಿಗಾಗಿ ನೀನು ಲಯಮಾಡುವೆಯಯ್ಯ
ಭಕುತರಿಗಾಗಿ ನಿನ್ನ ಸರ್ವ ವ್ಯಾಪಾರವಯ್ಯ
ಭಕುತ ವತ್ಸಲ ನಮ್ಮ ವಿಜಯವಿಠ್ಠಲರೇಯ
ಶುಕುತಿ ಸಾಲದಯ್ಯ ನಿನ್ನ ಮಹಿಮೆ ಪೇಳಲೆನಗೆ'

ಎಂಬುದಾಗಿ ಸ್ವಾಮಿಯನ್ನು ಕೊಂಡಾಡಿರುವರು. ಭಕ್ತವತ್ಸಲ ನಾದ ಭಗವಂತನಿಗೆ ತನ್ನ ಭಕ್ತರೊಡನೆ ಬಲು ಸಲಿಗೆ. ದಾಸಜನ ಮಂದಾ ರನಾದ ವಿಠಲನು ಪುರಂದರದಾಸರೊಂದಿಗಂತೂ ಆಡದ ಆಟವಿಲ್ಲ.

ಒಂದು ರಾತ್ರಿ ದಾಸರು ತಮ್ಮ ಶಿಷ್ಯರಲ್ಲೊಬ್ಬನಾದ ಅಪ್ಪಣ್ಣ ಭಾಗವತನೆಂಬವನನ್ನು ಕರೆದು ಮೃತ್ತಿಕಾಶೌಚಕ್ಕೆ ನೀರು ತರುವಂತೆ ಹೇಳಿ ತಾವು ಹೋದರು. ಅರೆನಿದ್ರೆಯಲ್ಲಿದ್ದ ಭಾಗವತನು'ಇದೋ ಈಗ ತಂದೆ ಗುರುಗಳೇ' ಎಂದವನೇ ಮತ್ತೆ ಮುಸುಕೆಳೆದು ಬಿಟ್ಟ. ಬಹಳ ಹೊತ್ತಾದರೂ ಅಪ್ಪಣ್ಣ ಬರಲಿಲ್ಲವೆಂದು ಕಾದು ಕಾದು ದಾಸರಿಗೆ ಸ್ವಲ್ಪ ಸಿಟ್ಟು ಬಂತು. ಅಷ್ಟರಲ್ಲಿ ವಿಠ್ಠಲದೇವರು ಅಪ್ಪಣ್ಣ ಭಾಗವತನ ವೇಷದಿಂದ ಬಂದು–'ಇದೋ ಗುರುಗಳೇ ನೀರು' ಎಂದು ತಂಬಿಗೆಯನ್ನು ದಾಸರ ಮುಂದಿಟ್ಟನು. ದಾಸರು 'ಮುಠ್ಠಾಳ! ನಿನಗೇನು ಮೈಮೇಲೆ ಎಚ್ಚರಿಲ್ಲವೇ? ಎಷ್ಟು ಕಾಯಬೇಕು? ಎಂದು ತಂಬಿಗೆಯಿಂದ ವೇಷಧಾರಿಯ ತಲೆಗೆ ಹೊಡೆದರು. ವೇಷಧಾರಿಯು ತಲೆಯನ್ನು ತಿಕ್ಕಿಕೊಳ್ಳುತ್ತಾ 'ಕ್ಷಮಿಸಿ ಗುರುಗಳೇ' ಎಂದು ಮನೆಯೊಳಗೆ ಹೋಗಿ ಮಾಯವಾದನು.

ದಾಸರು ಮನೆಯೊಳಗೆ ಬಂದು, ಮಲಗಿದ್ದ ಅಪ್ಪಣ್ಣನನ್ನು ಕಂಡು "ಎಲಾ! ಅಷ್ಟರಲ್ಲೇ ಮಲಗಿ ಬಿಟ್ಟೆಯಾ?" ಎಂದವರೇ ಅಪ್ಪಣ್ಣನ ಮುಸುಕನ್ನು ತೆಗೆದರು. ಅಪ್ಪಣ್ಣ ಗಾಬರಿಯಿಂದ ಎದ್ದು—"ಇದೋ! ಈಗ ನೀರು ತಂದೆ ಗುರುಗಳೇ" ಎನ್ನಲು ದಾಸರು "ಇನ್ನೆಂಥಾ ನೀರೋ ನೀರಂತೆ ನೀರು!" ಎನ್ನಲು ಆದರಿಂದ ಅಪ್ಪಣ್ಣ ಗುರುಗಳು ಬಹಳ ನೊಂದುಕೊಂಡರೆಂದು ತಿಳಿದು 'ಎಚ್ಚರವಾಗಲಿಲ್ಲ ಗುರುಗಳೇ ಕ್ಷಮಿಸಿ' ಎನ್ನಲು—

**ದಾಸರು:**—ತಲೆಗೆ ಟೊಣೆಸಿಕೊಂಡರೂ ಎಚ್ಚರಾಗಲಿಲ್ಲವೆ?

**ಅಪ್ಪಣ್ಣ:**—ಯಾರು ಗುರುಗಳೇ ಟೊಣೆಸಿಕೊಂಡವರು?

**ದಾಸರು:**—ನೀರು ತರಲುವಿಳಂಬ ಮಾಡಿದವರು!

**ಅಪ್ಪಣ್ಣ:**—ನಾನು ಮಲಗಿದವನು ಏಳಲೇ ಇಲ್ಲ!

**ದಾಸರು:**—ಹಾಗಾದರೆ ಈಗ ನೀರು ತಂದವರಾರು?

**ಅಪ್ಪಣ್ಣ:** ನನಗೆ ನಿಮ್ಮ ಮಾತು ಅರ್ಥವಾಗುತ್ತಿಲ್ಲ ಗುರುಗಳೇ!

**ದಾಸರು:**—ಇನ್ನೊಮ್ಮೆ ಚೆನ್ನಾಗಿ ಟೊಣೆದರೆ ಅರ್ಥವಾಗುತ್ತೆ!

**ಅಪ್ಪಣ್ಣ:**—ನಾನು ಟೊಣೆಸಿಕೊಂಡಿಲ್ಲ ಗುರುಗಳೇ!

ದಾಸರಿಗೂ ಅಪ್ಪಣ್ಣನ ಮಾತು ಅರ್ಥವಾಗಲಿಲ್ಲ. ಎಲ್ಲ ಶಿಷ್ಯರನ್ನೂ ನೀರು ತಂದವರ್ಯಾರೆಂದು ಕೇಳಿದರು. ಯಾರನ್ನು ಕೇಳಿದರೂ 'ತಾನಲ್ಲ ತಾನಲ್ಲ'ವೆಂದರು. ಧ್ಯಾನದಿಂದ ದಾಸರಿಗೆ ಇದು ಅಪಾರ ಮಹಿಮನಾದ ಶ್ರೀಹರಿಯ ವ್ಯಾಪಾರವೆಂದು ತಿಳಿಯಿತು. 'ಸ್ವಾಮಿ! ಇಂಥಾ ಆಟವಾಡಿ ನನ್ನನ್ನು ಪರೀಕ್ಷಿಸುವೆಯಾ! ನಿನ್ನ ಪರೀಕ್ಷೆಗೆ ನಾನು ವಸ್ತುವೇ!' ಎಂಬುದಾಗಿ ಸ್ವಾಮಿಯನ್ನು ನಾನಾ ಪ್ರಕಾರದಿಂದ ಸ್ತುತಿಸಿದರು. 'ಕ್ಷಮಿಸಿ ಗುರುಗಳೇ' ಎಂಬ ವೇಷಧಾರಿಯ ಮಾತು ದಾಸರಿಗೆ ಕಿವಿಗೆ ಕಟ್ಟಿದಂತಿತ್ತು.

ಇತ್ತ ಮಾರನೆಯದಿನ ಗುಡಿಯಲ್ಲಿ ಅರ್ಚಕನು ವಿಠಲ ದೇವರ ತಲೆಯು ಊದಿಕೊಂಡಿರುವುದನ್ನೂ ವಿಗ್ರಹದ ಕಣ್ಣಿಂದ ನೀರು ಸುರಿಯುತ್ತಿರುವುದನ್ನೂ ಕಂಡು ದೇವಸ್ಥಾನದ ಅಧಿಕಾರಿಗಳಿಗೆ ತಿಳಿಸಿದನು. ಅವರೂ ಬಂದು ನೋಡಿ ಚಕಿತರಾದರು. ಒಬ್ಬರಿಂದೊಬ್ಬರಿಗೆ ಈ ಸಮಾಚಾರ ತಿಳಿದು ಜನರು ಬಂದು ಬಂದು ನೋಡಿ ಹೋಗತೊಡಗಿದರು. ಅವರವರ ಬುದ್ಧಿಗೆ ಹೊಳೆದಂತೆ ಆಡಿಕೊಂಡರು. ಆದರೆ ಯಾರಿಗೂ ಈ ಸಮಸ್ಯೆಯು ಬಗೆಹರಿಯಲಿಲ್ಲ. ದಾಸರೂ ಭಜನೆಮಾಡುತ್ತ ಗುಡಿಗೆ ಬಂದರು. ವಿಠ್ಠಲನ ವಿಗ್ರಹವನ್ನು ಅಪ್ಪಿಕೊಂಡು 'ಪಾಂಡುರಂಗ! ಇದೇನು ಸ್ವಾಮಿ ಭಾರತ ಯುದ್ಧಕಾಲದಲ್ಲಿ ಬಾಣದೇಟನ್ನು ತಿಂದು ಅಳುಕದ ನೀನು ತಂಬಿಗೆಯ ಟೊಣಿತಕ್ಕೆ ಅಳುಕಿದೆಯಾ?' ಎಂಬುದಾಗಿ ದೇವರ ಕಿವಿಯಲ್ಲಿ ಹೇಳಿ ಅಲ್ಲಿ ನೆರೆದವರನ್ನು ಕುರಿತು 'ಯಾರೋ ತನ್ನವರೊಡನೆ ವಿಠ್ಠಲನು ಸರಸವಾಡಿದ್ದಾನೆ ಅಷ್ಟೇ. ನಿತ್ಯ ಪೂಜಾದಿಗಳು—ನಡೆಯಲಿ' ಎಂದು ವಿಗ್ರಹದ ತಲೆಯನ್ನು ಕೈಯಿಂದ ಸವರಿದರು, ಕಣ್ಣೊರೆಸಿದರು. ತಲೆಯೂದುದು ತಗ್ಗಿತು, ಕಣ್ಣಿಂದ ನೀರು ಸುರಿಯವುದು ನಿಂತಿತು. ದಾಸರು ಗೋಪಾಳಕ್ಕೆ ತೆರಳಿದರು. ವಿಠ್ಠಲದೇವರಿಗೆ ನಿತ್ಯದಂತೆ ಪೂಜಾದಿಗಳು ನಡೆದುವು.

ದೇವರು ಭಕ್ತರೊಡನೆ ಸರಸವಾಡುವಾಗ ಭಕ್ತರನ್ನು ನಾನಾವಿಧದಿಂ

ಒರೆಹಚ್ಚಿಯೇ ಹಚ್ಚುತ್ತಾನೆ. ಹಾಗಲ್ಲದೆ ದೈವಭಕ್ತರು ಪ್ರಖ್ಯಾತಿಗೆ ಬರುವುದೂ ಇಲ್ಲ. ಭಕ್ತರು ಖ್ಯಾತರಾಗದಿದ್ದರೆ ಭಕ್ತಿ ಪಂಥವು ಬೆಳೆಯುವುದೂ ಇಲ್ಲ, ಜನಗಳಲ್ಲಿ ದೈವಭಕ್ತಿಯು ಹೆಚ್ಚುವುದೂ ಇಲ್ಲ.

ವಿಠ್ಠಲನು ಪುರಂದರದಾಸರ ವೇಷದಿಂದ ಒಂದು ರಾತ್ರಿ ಆ ಊರಲ್ಲಿ ದುತ್ತಿದ್ದ ಸುಂದರಿಯಾದ ವೇಶ್ಯೆಯೊಬ್ಬಳ ಮನೆಗೆ ಹೋದನು. ದಾಸರ ಮಹಿಮೆಯನ್ನು ಆ ವೇಶ್ಯೆಯೂ ಕೇಳಿದ್ದಳು. ದಾಸರನ್ನು ಬಹಳ ಬಾರಿ ಕಂಡೂ ಇದ್ದಳು. ದಾಸರ ವಿಷಯದಲ್ಲಿ ಅವಳಿಗೂ ತುಂಬಾ ಭಕ್ತಿಯಿತ್ತು. ವೇಶ್ಯೆಯಾದರೇನು? ಗುಣವಂತೆಯಾಗಿರಬಾರದೆಂದೇನೂ ನಿಯಮವಿಲ್ಲವಷ್ಟೆ? ದಾಸರು ಬಂದುದನ್ನು ಕಂಡು ವೇಶ್ಯೆಯು ಅತ್ಯಾದರದಿಂದ 'ಬರಬೇಕು ಬರಬೇಕು! ನಾನು ಧನ್ಯೆ! ಬಡವರ ಮನೆಗೆ ಭಾಗೀರಥಿ ಬಂದಂತಾಯ್ತು' ಎಂದು ಸ್ವಾಗತಿಸಲು ವೇಷಧಾರಿಯು 'ಬಡವರ ಮನೆಗೆ ಭಾಗೀರಥಿಯೋ! ರಾಧೆಯ ಮನೆಗೆ ಕೃಷ್ಣನೋ! ಅದು ಹೇಗೂ ಇರಲಿ ಈ ಸುವರ್ಣ ಕಂಕಣವನ್ನು ತೆಗೆದುಕೊ. ನಾಳೆ ಇನ್ನೊಂದು ಕಂಕಣವನ್ನು ತಂದು ಕೊಡುವೆನು' ಎಂದವನೇ ಅಲ್ಲಿಂದ ಹೊರಟುಬಿಟ್ಟನು. ವೇಶ್ಯೆಯು ಎಷ್ಟು ಪ್ರಾರ್ಥಿಸಿದರೂ ನಿಲ್ಲಲಿಲ್ಲ. ವೇಶ್ಯೆಗೆ ಹೆಚ್ಚೇನೂ ಆಶ್ಚರ್ಯವಾಗಲಿಲ್ಲ. ಎಂಥವರೂ ಕಾಮವಶರಾಗುತ್ತಾರೆ, ದಾಸರೂ ಹಾಗೇ ಬಂದರು. ಆದರೆ ಅನುಭವ ಸಾಲದು, ಅಲ್ಲದೆ ಮಾನಭಯ! ಹೀಗಾಗಿ ನಿಲ್ಲದೇ ಹೊರಟು ಹೋಗಿರಬೇಕು. ನಾಳೆ ಬಂದೇ ಬರುತ್ತಾರೆ, ಎಂದು ತನ್ನಷ್ಟಕ್ಕೇ ಸಮಾಧಾನ ಮಾಡಿಕೊಂಡಳು. ವೇಷಧಾರಿಯು ಕೊಟ್ಟ ಕಂಕಣವನ್ನು ಭದ್ರವಾಗಿರಿಸಿದಳು.

ಇತ್ತ ಮಾರನೆಯ ದಿನ ವಿಠಲದೇವರ ಕಂಕಣವೊಂದು ಕಾಣೆಯಾಗಿದೆ ದೊರೆತವರು ತಂದೊಪ್ಪಿಸಬೇಕು. ಇಲ್ಲವಾದರೆ ಕಠಿಣ ಶಿಕ್ಷೆಗೆ ಗುರಿಯಾಗಬೇಕಾದೀತೆಂಬ ಸುದ್ದಿಯು ಊರಲ್ಲೆಲ್ಲಾ ಹಬ್ಬಿತು. ಈ ವೇಶ್ಯೆಯ ಕಿವಿಗೂ ಮುಟ್ಟಿತು. ವೇಶ್ಯೆಯು ವೇಷಧಾರಿಯು ಕೊಟ್ಟ ಕಂಕಣವನ್ನು ದೇವಸ್ಥಾನದ ಅಧಿಕಾರಿಯ ಬಳಿಗೆ ಬಂದು ತೋರಿಸಿ

'ನಿನ್ನೆಯ ದಿನ ಪುರಂದರದಾಸರು ನನ್ನ ಮನೆಗೆ ಬಂದಿದ್ದರು. ಈ ಕಂಕಣ ವನ್ನು ಕೊಟ್ಟುಹೋದರು. ಇದು ದೇವರ ಕಂಕಣವಾದರೆ ಸ್ವೀಕರಿಸಬೇಕು ನನಗೆ ಬೇಡ' ಎಂದೊಪ್ಪಿಸಲು ಅಧಿಕಾರಿಯು ದೇವರ ಕಂಕಣವನ್ನು ಕಂಡು 'ಇದೇ ದೇವರ ಕಂಕಣ, ನೀನಿಲ್ಲೇ ಇರು' ಎಂದು ನ್ಯಾಯಾಲ ಯಕ್ಕೆ ಈ ವಿಚಾರವನ್ನು ಮುಟ್ಟಿಸಿದನು. ನ್ಯಾಯಾಧಿಕಾರಿಯು ದಾಸ ರನ್ನೂ ಗುಡಿಗೆ ಕರೆಸುವಂತೆ ತಿಳಿಸಿ ತಾನೂ ಗುಡಿಗೆ ಬಂದನು. ದಾಸರನ್ನೂ ಕರೆತಂದರು. ದೇವರ ಸಮ್ಮುಖದಲ್ಲೇ ವಿಚಾರಣೆಗಾರಂಭವಾಯ್ತು. ಜನಕಿಕ್ಕಿರಿದಿದ್ದಾರೆ, ನ್ಯಾಯಾಲಯದಂತೆ ದೇವರ ಇದಿರಿನಲ್ಲಿ ನ್ಯಾಯಾ ಧಿಕಾರಿಯು ಉಪಸ್ಥಿತನಾದನು. ಆಚೆ ಈಚೆ ವಿಚಾರಣೆಯ ಸ್ಥಾನಗಳಲ್ಲಿ ವೇಶ್ಯೆಯನ್ನೂ ದಾಸರನ್ನೂ ನಿಲ್ಲಿಸಲಾಯ್ತು.

**ನ್ಯಾಯಾಧಿಕಾರಿ:**— ದಾಸರಿಗೆ ಈ ದೇವದಾಸಿಯ ಪರಿಚಯವೇ ನಾದರೂ ಇದೆಯೇ?

**ದಾಸರು:**—ಇಲ್ಲವೆಂತಿಲ್ಲ. ಈಕೆಯು ಸಾತ್ವಿಕಳು. ಅನೇಕಬಾರಿ ದೇ ವರ ಪ್ರೀತಿಯಾಗಲಿ ಎಂದು ಹಣ್ಣುಹಂಪಲುಗಳನ್ನು ನನಗೆ ಕೊಟ್ಟಿರುವಳು.

**ನ್ಯಾ:**—ನೀವು ಇವಳ ಮನೆಗೆ ಎಂದಾದರೂ ಹೋದುದುಂಟೆ?

**ದಾ:**—ಇಲ್ಲ.

**ನ್ಯಾ:**—ಮರೆತಿರಬಹುದು.

**ದಾ:**— ಹೋಗಿಯೇ ಇಲ್ಲವಾದಮೇಲೆ ಮರೆಯಲು ಕಾರಣವಿಲ್ಲ.

**ನ್ಯಾ:**— ಹರಿದಾಸರು ಸುಳ್ಳಾಡುವುದುಂಟೆ?

**ದಾ:**—ಹರಿದಾಸರು ಎಂದಿಗೂ ಸುಳ್ಳಾಡರು.

**ನ್ಯಾ:**—ನೀವು ಹರಿದಾಸರಲ್ಲವೆ?

**ದಾ:**—ಶ್ರೀ ಹರಿಯೇ ನಿರ್ಧರಿಸುವವನು.

**ನ್ಯಾ:**—ಶ್ರೀ ಹರಿಯು ಸುಳ್ಳನ್ನು ಹೇಳಲು ಆಜ್ಞೆಯಿತ್ತಿಲ್ಲವಷ್ಟೆ?

**ದಾ:**—ನನಗಂತೂ ಹಾಗೆ ಶ್ರೀಹರಿಯಾಜ್ಞೆಯಾಗಿಲ್ಲ.

**ನ್ಯಾ:** · ನೀವು ಸುಳ್ಳಾಡಿದುದು ನಿಜವಾಗಿದ್ದಲ್ಲಿ?

**ದಾ:**—ನ್ಯಾಯವು ನಿಷ್ಪಕ್ಷಪಾತವಾದುದಷ್ಟೆ? ಅಂದ ಮೇಲೆ ಸುಳ್ಳು ಹೇಳಿದವನು ಯಾರಾದರೂ ಶಿಕ್ಷಾರ್ಹನೇ.

**ನ್ಯಾ:** ನಿನ್ನಿನ ರಾತ್ರಿ ನೀವೀದೇವದಾಸಿಯ ಮನೆಗೆ ಹೋಗಿರುವಿರಂತೆ!

**ದಾ:**—ಎಂದೂ ಹೋಗಿಲ್ಲವೆಂದ ಮೇಲೆ ನಿನ್ನಿನ ರಾತ್ರಿಯೂ ನಾನು ಹೋಗಿಲ್ಲವೆಂದು ಪುನಃ ಹೇಳಬೇಕಾಗಿಲ್ಲವಷ್ಟೆ?

**ನ್ಯಾ:**—ಈಕೆಯನ್ನೇ ಕೇಳೋಣವೇ?

**ದಾ:** – ಕೇಳಬೇಕಾದುದೇ!

**ನ್ಯಾ:**–(ವೇಶ್ಯೆಯನ್ನು ಕುರಿತು) ಈ ದಾಸರು ನಿನ್ನ ಮನೆಗೆ ಎಂದಾದರೂ ಬಂದಿರುವರೆ?

**ವೇಶ್ಯೆ:**— ನಿನ್ನಿನ ರಾತ್ರಿ ಬಂದಿದ್ದರು.

**ನ್ಯಾ:**—ಬಂದವರು ಏನು ಹೇಳಿದರು?

**ವೇ:**— ಒಂದು ಸುವರ್ಣ ಕಂಕಣವನ್ನು ತಂದುಕೊಟ್ಟು ಇಂದು ಇನ್ನೊಂದು ಕಂಕಣವನ್ನು ಕೊಡುವೆನೆಂದು ಕ್ಷಣಕಾಲವೂ ನಿಲ್ಲದೆ ಹೊರಟು ಹೋದರು.

**ನ್ಯಾ:**—ಕೇಳಿದಿರಾ ದಾಸರೆ?

**ದಾ:**— ನಾನು ಹೋಗಿಲ್ಲ!

**ನ್ಯಾ:**—ಇದು ಹಟ!

**ದಾ:**—ಅಲ್ಲ ದಿಟ!

**ನ್ಯಾ:** —ಅಂದ ಮೇಲೆ ಈಕೆ ಹೇಳುತ್ತಿರುವುದೇ ಅಸತ್ಯವೆನ್ನುವಿರಾ?

**ದಾ:** - ಸತ್ಯಾಸತ್ಯ ನಿರ್ಣಯವಾದ ಮೇಲೆ ತಾನೇ ತಿಳಿಯುವುದು.

(ವೇಶ್ಯೆಯು ತಂದೊಪ್ಪಿಸಿದ ಕಂಕಣವನ್ನು ದಾಸರಿಗೆ ತೋರಿಸಿ--)

**ನ್ಯಾ:**—ಈ ಕಂಕಣವನ್ನು ದಾಸರು ಎಂದಾದರೂ ಕಂಡುದುಂಟೆ?

**ದಾ:**—ಇರಬಹುದು! ನಾನು ರತ್ನಪಡಿ ವ್ಯಾಪಾರದಲ್ಲಿದ್ದೆ.

**ನ್ಯಾ:**—ಇದು ವಿಠ್ಠಲ ದೇವರ ಕಂಕಣ ತಿಳಿಯಿತೇ?

**ದಾ:**—(ದೇವರ ಕಂಕಣಕ್ಕೂ ಕೈಮುಗಿದು) ಇರಬಹುದು.

**ನ್ಯಾ:**—ಈ ಕಂಕಣದ ಪರಿಚಯವಿದೆಯೇ?

**ದಾ:**—ದೇವರ ದರ್ಶನ ಕಾಲದಲ್ಲೂ ಕಂಡಿರಬಹುದು.

**ನ್ಯಾ:**—ಕಂಡುದು ಮಾತ್ರವೆ?

**ದಾ:**—ಸರ್ವಾಲಂಕಾರ ಸಹಿತನಾದ ಸ್ವಾಮಿಯನ್ನು ಕೊಂಡಾಡುವಾಗ ಕೊಂಡಾಡಿಯೂ ಇರಬಹುದು.

**ನ್ಯಾ:**—ದಾಸರೇ! ನಿನ್ನಿನ ರಾತ್ರಿ ಇದೇ ಕಂಕಣವನ್ನು ನೀವು ಈ ದೇವದಾಸಿಗೆ ಕೊಟ್ಟು ಇಂದು ಇನ್ನೊಂದು ಕಂಕಣವನ್ನು ಕೊಡುವೆನೆಂದು ಹೇಳಿ ಬಂದಿರುವಿರೆಂದು ಈಕೆಯು ಹೇಳುತ್ತಿರುವಳು ಮಾತ್ರವಲ್ಲ ಈ ಕಂಕಣವನ್ನು ಈಕೆಯೇ ಅಧಿಕಾರಿಗಳಿಗೆ ತಂದೊಪ್ಪಿಸಿರುವಳು.

**ದಾ:**—ದೇವದಾಸಿಯ ಹೇಳಿಕೆಯನ್ನು ನಂಬುವುದು ಅಥವಾ ಬಿಡುವುದು ನ್ಯಾಯಾಧಿಕಾರಿಗಳ ಚಿತ್ತ. ಆದರೆ ನಾನು ಈಕೆಯ ಮನೆಗೆ ಹೋಗಿಯೇ ಇಲ್ಲ.

**ನ್ಯಾ:**—ನಿಮ್ಮ ಮಾತನ್ನು ನಾವು ಹೇಗೆ ನಂಬಲು ಸಾಧ್ಯ!

**ದಾ:**—ಪಾಂಡುರಂಗನೇ ಸಾಕ್ಷಿ!

**ನ್ಯಾ:**—(ವೇಶ್ಯೆಯನ್ನು ಕುರಿತು) ನಿನ್ನ ಹೇಳಿಕೆಯನ್ನು ಹೇಗೆ ನಂಬೋಣ, ಯಾರ ಸಾಕ್ಷಿ?

**ವೇ:**—ನಾನು ಕಂಕಣವನ್ನು ತಂದು ಸನ್ನಿಧಾನಕ್ಕೊಪ್ಪಿಸಿರುವೆನು. ತಂದುಕೊಟ್ಟವರು ದಾಸರೇ ಎಂಬುದಕ್ಕೆ ನನಗೂ ಪಾಂಡುರಂಗನೇ ಸಾಕ್ಷಿ!

ಏಕಾಂತದಲ್ಲಿ ನಡೆದ ವಿಚಾರವಾದುದರಿಂದ ಬೇರೇನನ್ನೂ ಸನ್ನಿಧಾನದಲ್ಲಿ ಹೇಳಲಾರೆ! ನನ್ನ ಮಾತನ್ನು ಸನ್ನಿಧಾನವು ನಂಬಲೂ ಬಹುದು ಬಿಡಲೂ ಬಹುದು. ನಾನೂ ಸನ್ನಿಧಾನದ ಚಿತ್ತವೆಂದಿಷ್ಟೇ ಹೇಳುತ್ತೇನೆ.

**ನ್ಯಾ:**—ದಾಸರೇ ಈ ಕಂಕಣವು ಕಾಣೆಯಾಗಿತ್ತು. ಈಕೆಯೇ ತಂದೊಪ್ಪಿಸಿ ತನಗೆ ತಿಳಿದ ವಿಚಾರಗಳನ್ನು ತಿಳಿಸಿರುವಳಾದುದರಿಂದ ಈಕೆಯ ಹೇಳಿಕೆಯನ್ನೇ ನಾವು ನಂಬಬೇಕಾಗಿದೆ.

**ದಾ:**—ಆಗಬಹುದು.

**ನ್ಯಾ:**—ನೀವು ಶಿಕ್ಷೆಯನ್ನನುಭವಿಸಲು ಸಿದ್ಧರಾಗಬೇಕು.

**ದಾ:**- ಸಿದ್ಧನಾಗಿಯೇ ಇದ್ದೇನೆ, ಹರಿಚಿತ್ತ.

**ನ್ಯಾ:**—(ಕುಪಿತನಾಗಿ ವ್ಯಂಗ್ಯ ಸಹಿತವಾಗಿ) ಏನುದಾಸರೇ! ಎಂಥಾ ವಿರಕ್ತರ ವೇಷ ನಿಮ್ಮದು! ಬಾಯಿವೇದಾಂತದಲ್ಲಿ ನೀವು ಬಹಳ ನಿಪುಣರು! ಮಾಡುವುದು ದುರಾಚಾರ ಮನೆಮುಂದೆ ಬೃಂದಾವನ ಎಂಬಂತಾಯ್ತಲ್ಲ ನಿಮ್ಮ ವಿಚಾರ! ಇಂಥಾ ಕೆಲಸವನ್ನು ನಿಮ್ಮಂಥವರು ಮಾಡಬಹುದೇ?

**ದಾ:**—ಯಾವ ಕೆಲಸವನ್ನೂ ಮಾಡಲು ಯಾರೂ ಸ್ವತಂತ್ರರಲ್ಲ!

**ನ್ಯಾ:**—ಅಂದರೆ?

**ದಾ:**—ಸರ್ವರಿಗೂ ಹರಿವಾಯುಗಳ ಪ್ರೇರಣೆ!

**ನ್ಯಾ:**-- ಈ ದುಷ್ಕರ್ಮವನ್ನು ಮಾಡಲು ಹರಿ ವಾಯುಗಳೇ ಪ್ರೇರಿಸಿದರು ಅನ್ನಿ!

**ದಾ:**—ದುಷ್ಕರ್ಮಕ್ಕೇ ಆಗಲಿ ಸತ್ಕರ್ಮಕ್ಕೇ ಆಗಲಿ ಪ್ರೇರಕರು ಅವರೇ!

**ನ್ಯಾ:**—ಕರ್ಮಕ್ಕೆ ತಕ್ಕ ಫಲಕೊಡಿಸುವವರೂ ಅವರೇ!

**ದಾ:**—ಸಂಶಯವೇನು–ಕೃತಕರ್ಮದ ಫಲವನ್ನು ಎಲ್ಲರೂ ಅನುಭವಿಸಲೇ ಬೇಕು; ಬೇಡವೆಂದರೆ ಬಿಡದು!

**ನ್ಯಾ:**—ಹಾಗಾದರೆ ದೇವರ ಕಂಕಣವನ್ನು ಕದಿಯುವಂತೆ ನಿಮಗೆ ಪ್ರೇರಣೆ! ತಕ್ಕ ಶಿಕ್ಷೆಯನ್ನು ಕೊಡಿಸುವಂತೆ ನಮಗೆ ಪ್ರೇರಣೆ! ಕದಿಯುವುದು ನಿಮ್ಮ ಕರ್ಮ! ಕದ್ದವರಿಗೆ ಶಿಕ್ಷೆಕೊಡುವದು ನಮ್ಮ ಕರ್ಮ!

**ದಾ:**—ಕೊಟ್ಟ ಶಿಕ್ಷೆಗೆ ಸಿದ್ಧನಾಗಲು ನನಗೂ ಪ್ರೇರಣೆಯಾಯ್ತು!

**ನ್ಯಾ:**—ಸಾಕುಮಾಡಿ ನಿಮ್ಮ ವೇದಾಂತ!

**ದಾ:**—ಹರಿಚಿತ್ತ!

ನ್ಯಾಯಾಧಿಕಾರಿಯು ರೋಷದಿಂದ ದಾಸರನ್ನು ದೇವರೆದುರಿನ ಕಂಬಕ್ಕೆ ಕಟ್ಟಿಸಿ ಹೊಡೆಸಲಾರಂಭಿಸಿದನು. ದಾಸರು ಸ್ವಾಮಿಯನ್ನೇ ಕಣ್ತುಂಬ ನೋಡುತ್ತಾ 'ಸ್ವಾಮಿ ಇದೇನು ನಿನ್ನಾಟ! ನೀನಾಗಿ ಬಂದು ತಂಬಿಗೆಯಿಂದ ಟೊಣೆಸಿಕೊಂಡು ನನಗೀ ಶಿಕ್ಷೆಯೇ! ತಿಳಿಯಿತು. ನಿನ್ನ ದಾಸರು ಕ್ರೋಧಕ್ಕೆ ವಶರಾಗಬಾರದೆಂದಲ್ಲವೆ ಆಗಲಿ' ಎಂದು ಆಗಲೂ ಭಕ್ತಿ ಭಾವದಿಂದ—

ರಾಗ ಪೂರ್ವಿ ಮಟ್ಟೆತಾಳ

ಮುಯ್ಯಕ್ಕೆ ಮುಯ್ಯ ತೀರಿತು ॥ ಪ ॥
ಜಗ–ದಯ್ಯ ಸಹಯ್ಯ ವಿಜಯ್ಯ ಪಂಢರಿರಾಯ ॥ ಅ ॥ ಪ ॥
ಸಣ್ಣವನೆಂದು ನಾನೀರತಾರೆಂದರೆ
ಬೆಣ್ಣೆಕಳ್ಳ ಕೃಷ್ಣ ಮರವುಮಾಡಿ ॥
ನಿನ್ನ ಚಿತ್ತದಂತೆ ನೀರನು ತಂದರೆ †
ನಿನ್ನ ತಂಬಿಗೆಯಲ್ಲೆ ನಿನ್ನ ನಾಟೊಣೆದೆನೊ ॥ ೧ ॥

ಎನ್ನ ಹೆಸರಿನಿಂದ ಸೂಳೆಗೆ ಕಂಕಣ
ವನ್ನು ನೀನ್ಯೊದಿತ್ತು ನಿಜರೂಪದಿ ॥
ಸನ್ನುತ ಈಪರಿ ಬಂಡು ಮಾಡಿಸೀ
ಮಾನ್ನವರೊಳು ಎನ್ನಮಾನ ಕೊಂಡೆಯೋ ಕೃಷ್ಣ ॥ ೨ ॥

---

† ಚಿನ್ನದ ಗಿಂಡಿಲಿ ನೀರ ತಾರೆಂದರೆ
ಕಣ್ಣುಕಾಣದೆ ನಾ ಟೊಣೆದೆ ಪಂಢರಿರಾಯ —ಪಾಠಾಂತರ ॥

ಭಕ್ತ ವತ್ಸಲನೆಂಬೊ ಬಿರುದು ಬೇಕಾದರೆ
ಭಕ್ತರಧೀನ ನೀನಿರಬೇಡವೇ ||
ಯುಕ್ತಿಲಿ ನಿನ್ನಂಥ ದೇವರ ನಾಕಾಣೆ
ಮುಕ್ತೇಶ ಪುರಂದರ ವಿಠಲ ಪಂಢರಿರಾಯ || ೩ ||

ಎಂಬುದಾಗಿ ನಿಂದಾಸ್ತುತಿಯನ್ನು ಮಾಡುತ್ತಿರಲು ಅಷ್ಟರಲ್ಲೇ ಒಬ್ಬ ವಟುವಿನಲ್ಲಿ ವಿಠ್ಠಲದೇವರು ಆವಿಷ್ಟನಾಗಿ—'ನನ್ನ ಭಕ್ತರನ್ನು ಶಿಕ್ಷಿಸಿದರೆ ನನ್ನನ್ನು ಶಿಕ್ಷಿಸಿದಂತೆಯೇ. ಈ ನನ್ನ ಭಕ್ತನು ನಿರಪರಾಧಿಯು, ಈ ವೇಶ್ಯೆಯೂ ನಿರಪರಾಧಿನಿಯು, ಈ ವೇಶ್ಯೆಗೆ ನನ್ನ ಇನ್ನೊಂದು ಕಂಕಣ ವನ್ನೂ ಕೊಟ್ಟುಬಿಡಿ'ಯೆಂದಾಜ್ಞೆಯನ್ನಿತ್ತನು. ಅಲ್ಲದೆ ದಾಸರನ್ನು ನ್ಯಾಯಾಧಿಕಾರಿಯು ಹೊಡೆಸಲಾರಂಭಿಸಿದಾಕ್ಷಣದಿಂದ ನ್ಯಾಯಾಧಿಕಾರಿಗೆ ಕಶೆಯೇಟಿನ ಅನುಭವವಾಗತೊಡಗಿತು. ಅಧಿಕಾರಿಯು ಕಶೆಯಿಂದ ದಾಸ ರನ್ನು ಹೊಡೆಯುತ್ತಿರುವವನಿಗೆ ನಿಲ್ಲಿಸಲು ಆಜ್ಞೆಯಿತ್ತು ದಾಸರಿಗೆ ಕಟ್ಟಿದ ಕಟ್ಟನ್ನು ತಾನೇ ಬಿಡಿಸಿ ದಾಸರ ಪಾದಗಳ ಮೇಲೆಬಿದ್ದು—"ಲೋಕದ ಸಾಮಾನ್ಯ ನ್ಯಾಯವನ್ನೇ ಬಗೆಹರಿಸಲು ಆಗದೆ ತೊಳಲುವ ನಮ್ಮಂಥ ಪಾಮರರಿಗೆ ಭಗವಂತ ಮತ್ತು ಅವನ ಭಕ್ತರ ನ್ಯಾಯವನ್ನು ಪರಿಹರಿಸಲು ಸಾಧ್ಯವೇ? ಈ ಪಾಮರನನ್ನು ಕ್ಷಮಿಸಬೇಕು" ಎಂಬುದಾಗಿ ಪ್ರಾರ್ಥಿಸಿ ದನು. ದಾಸರು ನ್ಯಾಯಾಧಿಕಾರಿಯನ್ನು ಕುರಿತು 'ಭಗವಂತನ ಲೀಲೆ ಯನ್ನು ಯಾರಿಂದಲೂ ಸಂಪೂರ್ಣ ಅರಿಯಲು ಸಾಧ್ಯವಿಲ್ಲ! ನಿಮ್ಮ ಅಧಿಕಾ ರದಂತೆ ನಿಮಗೆ ದೊರೆತ ಸಾಕ್ಷಿಯಂತೆ ನೀವು ನ್ಯಾಯವನ್ನೇ ಪರಿಪಾಲಿಸಿರು ವಿರಿ. ಸ್ವಾಮಿಯ ನ್ಯಾಯವು ಮಾತ್ರ ನಮ್ಮ ಬುದ್ಧಿಗೂ ನಿಲುಕುವುದಲ್ಲ' ಹೀಗೆ ತಕ್ಕ ಮೃದುವಾಕ್ಯಗಳಿಂದ ಸಂತವಿಸಿದರು. ನ್ಯಾಯಾಧಿಕಾರಿಯು ವಿಠ್ಠಲದೇವರ ಸುವರ್ಣ ಕಂಕಣಗಳೆರಡನ್ನೂ ವೇಶ್ಯೆಗೆ ಕೊಡಿಸಲು ವೇಶ್ಯೆಯು ಆ ಕಂಕಣಗಳನ್ನು ಕಣ್ಣಿಗೊತ್ತಿಕೊಂಡು ದಾಸರ ಸಮ್ಮುಖದಲ್ಲಿ ರಿಸಿ ದಾಸರಿಗಭಿವಂದಿಸಿ 'ಈ ದೀನಳನ್ನೂ ಕ್ಷಮಿಸಬೇಕು ಈ ಕಂಕಣಗಳನ್ನು ಸ್ವೀಕರಿಸಿ ಅನುಗ್ರಹಿಸಬೇಕು' ಎಂದು ಪ್ರಾರ್ಥಿಸಲು ದಾಸರು ವೇಶ್ಯೆ ಯನ್ನೂ ಹಿತವಾಕ್ಯಗಳಿಂದ ಸಂತುಷ್ಟಿಪಡಿಸಿ 'ನೀನೇ ಈ ಕಂಕಣಗಳನ್ನು

ನಮ್ಮ ಅಪೇಕ್ಷೆಯಂತೆ ವಿಠ್ಠಲನಿಗೆ ಅರ್ಪಿಸಿಬಿಡು' ಎನ್ನಲು ವೇಶ್ಯೆಯು ದೇವರ ಮುಂದಿರಿಸಿ 'ದಯಾನಿಧೇ ನೀನೇ ಇವನ್ನು ಸ್ವೀಕರಿಸು. ನಿನ್ನ ವಸ್ತುವೇ ನಿನಗರ್ಪಿತವು' ಎಂದಳು. ಅರ್ಚಕನು ಕಂಕಣಗಳನ್ನು ದೇವರಿಗೆ ತೊಡಿಸಿದನು. ನೆರೆದವರೆಲ್ಲರೂ 'ದಾಸರು ಮಹಾನುಭಾವರು' ಎಂದು ಕೊಂಡು ವಿಠ್ಠಲನಿಗೂ ದಾಸರಿಗೂ ವಂದಿಸಿ ತೆರಳಿದರು.

ಪಂಢರಪುರದಲ್ಲಿ ಪುರಂದರ ದಾಸರನ್ನು ಕಟ್ಟಿದ ಕಂಬವನ್ನು **'ದಾಸರಕಂಬ'**ವೆಂದು ಯಾತ್ರಿಕರಿಗೆ ಸ್ಥಳಿಕರು ತೋರಿಸುವರು.

ಕರ್ಣಾಟಕ ಹರಿದಾಸರುಗಳೆಲ್ಲಾ ಯಾವ ಮಹಾನುಭಾವರ ಹೆಸರನ್ನು ಹೇಳಿಕೊಂಡೇ ಜೀವಿಸಬೇಕೋ, ಯಾವ ಮಹಾನುಭಾವರಿಂದಲೇ ಭಕ್ತಿ ಪಂಥದ ಪುನರುದ್ಧಾರ; ತತ್ರಾಪಿ ಕರ್ಣಾಟಕದಲ್ಲಿ ಮುಖ್ಯವಾಗಿ ಹರಿಭಕ್ತಿ ಪ್ರಚಾರವು ನೆರವೇರಿತೋ, ಯಾವ ಮಹಾನುಭಾವರಿಂದ ಕರ್ಣಾಟಕ ಪದ್ಯ ಭಾಗವು ಕಳೆಯೇರಿ ಜನತೆಗೆ ತಮ್ಮ ನೀತಿಯನ್ನು ಸರಿಯಾದ ಮಾರ್ಗದಲ್ಲಿರಿಸಿಕೊಳ್ಳಲುಮಾರ್ಗದರ್ಶಕವಾಗಿ ನಿಂತಿರುವುದೋ, ಸರ್ವತೋ ಮುಖದಿಂದ ಶ್ರೀಮದಾಚಾರ್ಯರು ತೋರಿಸಿಕೊಟ್ಟ ಭಕ್ತಿಪಂಥವನ್ನು ಸಾಮಾನ್ಯರಿಗೂ ಅರಿಯುವಂತೆ ಕನ್ನಡ ವಾಙ್ಮಯದಲ್ಲಿ ಸಾರಿ ಮತಕ್ಕೂ, ಜನತೆಗೂ ಭಾಷೆಗೂ ಯಾವ ಮಹಾನುಭಾವರಿಂದ ಮಹಾಸೇವೆಯು ಸಂದಿರುವುದೋ ಅಂಥಾ ಹರಿದಾಸೋತ್ತಮರಾದ ಶ್ರೀಪುರಂದರ ದಾಸರ ಸ್ಮಾರಕವಾಗಿ ಪಂಢರಪುರದಲ್ಲಿಯಾಗಲಿ ಮತ್ತೆಲ್ಲಿಯಾಗಲಿ ಉಳಿದಿರುವ ಸ್ಮಾರಕವೆಂದರೆ ಇದೊಂದು ಕಂಬ. ಗೆದ್ದಲುತಿನ್ನದೆ ಉಳಿದು ಪ್ರಚಾರಕ್ಕೆ ಬಂದಿರುವ ನಾಲ್ಕು ಮುಕ್ಕಾಲು ಲಕ್ಷಗ್ರಂಥದ ಅವಿಶಿಷ್ಟ ಭಾಗವಾದ ನಾಲ್ಕೈದುಸಾವಿರ ಪದಸುಳಾದಿಗಳು.

ಪುರಂದರ ದಾಸವರ್ಯರವರಿಗಿಂತಲೂ ಒಂದು ಶತಮಾನಗಳ ಈಚಿನವರಾಗಿ "ಪುರಂದರ ದಾಸರೇ ಸಂಗೀತ ಶಾಸ್ತ್ರ ಜೀರ್ಣೋದ್ಧಾರಕ್ಕೆ ಮೂಲ ಪುರುಷರು ತಮಗೆ ಗುರುಗಳು" ಎಂದೊಪ್ಪಿಕೊಳ್ಳುವ ತ್ಯಾಗರಾಜರ ಸ್ಮಾರಕವಾಗಿ ಎಷ್ಟೊಂದು ಸ್ಮಾರಕ ವಿಗ್ರಹಗಳನ್ನು ಶಾಸನಗಳನ್ನು ಗ್ರಂಥಗಳನ್ನು ತ್ಯಾಗರಾಜರ ಭಕ್ತ ಜನಗಳು ಕಾಪಾಡಿಕೊಂಡು ಬಂದಿರುವರು. ಮತ್ತು

ಪುರಂದರದಾಸರೇ ತಮಗೆ ಮಾರ್ಗದರ್ಶಕರೆಂದೊಪ್ಪಿಕೊಳ್ಳುವ ಮಹಾರಾಷ್ಟ್ರ ಸಂತರುಗಳ ಸ್ಮಾರಕಗಳು ಎಷ್ಟೊಂದು ದಕ್ಷತೆಯಿಂದ ರಕ್ಷಿತವಾಗಿವೆ! ಎಂಬು ದನ್ನು ಕಂಡಾಗ ಕನ್ನಡಿಗರ ಕರುಳು ಕೊರೆಯದಿರದು.

ಪಂಢರಾಪುರದಲ್ಲಿ ತುಕಾರಾಮರದಂತೂ ವಿಗ್ರಹವೇ ದೇವರ ಸಮೀ ಪದಲ್ಲೇ ಇದೆ. ಇನ್ನು ಸಮರ್ಥರು, ಜ್ಞಾನದೇವ, ನಾಮದೇವ, ಏಕನಾ ಥರ ಸ್ಮಾರಕಗಳು ಸಾಕಷ್ಟಿವೆ.

ಆದರೆ ನಿರಭಿಮಾನಿ ಕರ್ಣಾಟಕದಲ್ಲಿ ಬಂದು ಅವತರಿಸಿದ ಯಾವ ದಾಸರುಗಳದೂ ಏನೂ ಹೇಳಿಕೊಳ್ಳುವಂಥ ಸ್ಮಾರಕಗಳಿಲ್ಲ. ಇರುವುದಾ ದರೆ ಇದೊಂದು ಕಂಬ. ಮಹಾರಾಷ್ಟ್ರರು ಏನೋ ಸ್ವಲ್ಪ ಔದಾರ್ಯವನ್ನು ತೋರಿ ಇದೊಂದು ಕಂಬವನ್ನಾದರೂ ಪುರಂದರ ದಾಸರ ಕಂಬವೆಂದು ಇಷ್ಟರ ತನಕ ಒಪ್ಪಿಕೊಳ್ಳುತ್ತಿರುವುದರಿಂದ ದಾಸರೊಡನೆ ವಿಠಲನು ಸರಸ ವಾಡಿದನೆಂಬ ಈ ಪ್ರಕರಣವನ್ನು ಬರೆಯಬಹುದಾಗಿದೆ.

ಇಂದು ಸಾಹಿತಿಗಳಿಗೆ ಪ್ರಪಂಚದಲ್ಲೇ ವಿಶಿಷ್ಟ ಗೌರವವಿದೆ. ಆದರೆ ಪುರಂದರದಾಸರೇ ಮೊದಲಾದ ಭಕ್ತಿಪಂಥದ ಸಾಹಿತಿಗಳ ಸಾಹಿತ್ಯವನ್ನೂ ನವ್ಯ ಸಾಹಿತ್ಯದೊಂದಿಗೆ ವಿಶಿಷ್ಟರೀತಿಯಿಂದ ಪ್ರಚಾರಕ್ಕೆ ತರಲು ಕನ್ನಡ ಸಾಹಿತಿಗಳೂ, ಅಲ್ಲದೆ ಕನ್ನಡಿಗರೆಲ್ಲರೂ ಮನಸ್ಸುಮಾಡದಿದ್ದರೆ ಮತ್ತೆ ಬಹಳ ಪಶ್ಚಾತ್ತಾಪ ಪಡಬೇಕಾದೀತು.

ಇಂದಿಗೆ ಪುರಂದರದಾಸರ ಉತ್ಸವವನ್ನು ಬಹಳ ಕಡೆಗಳಲ್ಲಿ ನಡೆಸು ತ್ತಿರುವರಾದರೂ ಪ್ರತಿಯೊಂದು ಕಡೆಯೂ ಒಂದೆರಡು ವರ್ಷ ಸ್ವಲ್ಪ ವೈಭ ವದಿಂದ ನಡೆದರೆ ತೀರಿತು. ಆಮೇಲೆ ಬರಬರುತ್ತಾ ದಾಸರ ಪಟವನ್ನು ಹಿಡಿದುಕೊಂಡು ಭಜನೆಮಾಡುತ್ತಾ ಒಂದು ಗ್ರಾಮ ಪ್ರದಕ್ಷಿಣೆಯನ್ನು ಮಾಡಲಿಕ್ಕೂ ನಾಲ್ಕು ಹುಡುಗರು ಒಬ್ಬ ಮುಖಂಡ ಇಷ್ಟರಲ್ಲೇ ಮುಗಿಯು ವಂತಾಗಿದೆ.

ಮಠಾಧಿಪತಿಗಳೂ, ಪಂಡಿತರೂ, ಶ್ರೀಮಂತರೂ, ಅಧಿಕಾರಿಗಳೂ, ಹೆಚ್ಚೇನು ಕನ್ನಡಿಗರೆಲ್ಲರೂ ಪುರಂದರದಾಸರು ಮತ್ತು ಇತರ ಅಪರೋಕ್ಷಿ

ಗಳಾದ ಹರಿದಾಸರ ಸ್ಮಾರಕೋತ್ಸವಕ್ಕೂ ಅವರುಗಳ ಗ್ರಂಥ ಪ್ರಚಾರಕ್ಕೂ ವಿಶೇಷ ಬೆಂಬಲವನ್ನು ನೀಡುತ್ತ ಬಂದರೆ ಮಾತ್ರ ಸಾಮಾನ್ಯ ಜನಗಳಲ್ಲೂ ದೈವಭಕ್ತಿ, ಗುರುಭಕ್ತಿ, ಭೂತದಯೆಯೇ ಮೊದಲಾದ ಗುಣಗಳು ವೃದ್ಧಿಗೆ ಬಂದು ಕನ್ನಡ ನಾಡು, ಕನ್ನಡ ಭಾಷೆ, ಕನ್ನಡ ಜನತೆ ಉಚ್ಚಸ್ಥಿತಿಯನ್ನು ಹೊಂದುವುದು. ಆದುದರಿಂದ ಎಲ್ಲ ಭಗವದ್ಭಕ್ತರಿಗೂ, ಕನ್ನಡಿಗರಿಗೂ ಹರಿದಾಸರ ಸ್ಮಾರಕೋತ್ಸವದತ್ತ ಮತ್ತು ಹರಿದಾಸ ಸಾಹಿತ್ಯ ಪ್ರಚಾರದತ್ತ ಒಲವು ಉಂಟಾಗುವಂತೆ ಪುರಂದರದಾಸರಿಗೊಲಿದ ವಿಠ್ಠಲನ ಅಡಿದಾವರೆಗಳಲ್ಲಿ ಪ್ರಾರ್ಥಿಸಿ ಈ ಪ್ರಕರಣವನ್ನು ಇಂದೊಂದು ಪ್ರತ್ಯೇಕ ಲೇಖನವೆಂದು ಓದುಗರು ಭಾವಿಸಿದರೂ ಚಿಂತೆಯಿಲ್ಲ, ಮುಗಿಸುತ್ತೇನೆ.

## ಮತವೈಷಮ್ಯ ಪರಿಹಾರವು

ಶ್ರೀ ಪುರಂದರ ದಾಸರು ಸೊಲ್ಲಾಪುರದಲ್ಲಿರುವಾಗ ವೀರಶೈವರಿಗೂ ಬ್ರಾಹ್ಮಣರಿಗೂ ಮತವೈಷಮ್ಯದಿಂದಾಗಿ ಮೊದಮೊದಲು ವಾಕ್ಕಲಹದಲ್ಲೇ ಉಭಯಪಕ್ಷದವರೂ ತಮ್ಮ ಛಲವನ್ನು ಕಾರಿಕೊಳ್ಳುತ್ತಿದ್ದರೂ ಕೊನೆಕೊನೆಗೆ ಕೈಕೈ ಹತ್ತಲು ಆರಂಭವಾಗಿ ತಲೆಗಳು ಉರುಳುವ ಪ್ರಸಂಗ ಬಂದೊದಗಿತು. ದಾಸರು ವೀರಶೈವರಲ್ಲಿ ಈ ಸಂದರ್ಭದಲ್ಲಿ ಮುಂದಾಳಾದವರನ್ನು ಕರೆಸಿ—

**ಪೂರ್ವಿರಾಗ ತಾಳ ತ್ರಿಪುಟ**

ಜಂಗಮರು ನಾವೂ ಲಿಂಗಾಂಗಿಗಳು ॥ ಪ ॥
ಜಂಗಮರು ನಾವು ಲಿಂಗಾಂಗಿಗಳು
ಮಂಗಳವಂತರು ನಾವೂ ಭವಿಗಳು ॥ ಅ ॥ ಪ ॥

ಹರಗುರು ನಮಗೆ ಕೇಶವ ನಮ್ಮ ಮನೆದೈವ
ವರದ ಮೋಹನ ಗುರು ಶಾಂತೇಶ ॥

ಹರಿಗುರು ದ್ರೋಹ ಮಾಡಿದ ಪರವಾದಿಯು
ನರಕದೊಳಗೆ ಬಿದ್ದು ಮುಳುಗೋದೆ ಸಿದ್ಧ ॥ ೧ ॥

ವಿಭೂತಿ ನಮಗುಂಟು ವಿಶ್ವೇಶನನಮಗುಂಟು
ಶೋಭನ ನಾಮ ಮುದ್ರೆಗಳುಂಟು ||

ಶ್ರೀ ಭಾಗೀರಥಿಯ ಅಗಣಿತ ಮಜ್ಜನ ಉಂಟು
ಸೌಭಾಗ್ಯವೀವ ಮಹಂತನ ಮಠ ಉಂಟು || ೨ ||

ವಿರಕ್ತರು ನಾವು ಶೀಲವಂತರು ನಾವು
ವೀರಭದ್ರ ಪ್ರಿಯ ಭಕ್ತರು ನಾವು ||

ಕಾರಣ ಕರ್ತ ಶ್ರೀ ಪುರಂದರ ವಿಠಲನ
ಕಾರುಣ್ಯಕೆ ಮುಖ್ಯ ಪಾತ್ರರು ನಾವು || ೩ ||

ಎಂಬುದಾಗಿ ಉಭಯ ಪಕ್ಷದವರಿಗೂ ಹಿತವಾಗುವ ಅರ್ಥ ಗಾಂಭೀರ್ಯದಿಂದ ಹಾಡಿ ಸಾಮರಸ್ಯ ಉಂಟಾಗುವಂತೆ ಮಾಡಿ ಶಾಂತಿಭಂಗವಾಗದಂತೆ ಮಾಡಿದರು.

ಮಾತೆತ್ತಿದರೆ ಮತವೈಷಮ್ಯದಿಂದ ವೈಯುಕ್ತಿಕ ವೈರದ ಕೊನೆಯನ್ನು ಮುಟ್ಟಿ ಅಲ್ಲಲ್ಲಿ ಮುಷ್ಕರ ಹೊಡೆದಾಟ ಬಡಿದಾಟಗಳಾಗುತ್ತಿರುವ ಈ ಕಾಲದಲ್ಲಿ ಇಂತಹ ಪ್ರಸಂಗಗಳೊದಗಿದಾಗ ಘರ್ಷಣೆಯೊದಗದಂತೆ ಶಾಂತಿಯನ್ನು ಕಾಯ್ದುಕೊಳ್ಳುವುದು ಎಷ್ಟು ಕಷ್ಟವೆಂಬುದನ್ನು ಶಾಂತಿಸ್ಥಾಪನೆಗಾಗಿ ಹಾತೊರೆಯುವವರೆಲ್ಲರೂ ಬಲ್ಲರು.

ಪರಿಸ್ಥಿತಿಯು ವಿಷಮಕ್ಕೆ ಮುಟ್ಟಿದಾಗ ನೆಮ್ಮದಿಯನ್ನು ಉಳಿಸಲು ಯತ್ನಪಡುವವರಲ್ಲಿ ಸಾಮಾನ್ಯ ಸಾಹಸವಿದ್ದರೆ ಸಾಲದು. ಅಲ್ಲದೆ ಇಂಥವರಲ್ಲಿ ಘನ ವ್ಯಕ್ತಿತ್ವ, ವಾಕ್ಪಟುತ್ವ, ತರ್ಕವಿದ್ಯೆ, ಲೋಕಾನುಭವಗಳೂ ಎಷ್ಟಿದ್ದರೂ ಸಾಲದು. ಇಷ್ಟೇ ಅಲ್ಲ ಮನಃಶಾಂತತೆ, ತಪಃಶಕ್ತಿ, ಧೈರ್ಯಸ್ಥೈರ್ಯಾದಿಗಳು ಬೇಕು. ದರೆ ಇಂತಹ ಬಿಕ್ಕಟ್ಟಿನ ಪ್ರಸಂಗ ಒದಗಿದಾಗ ಪರಿಸ್ಥಿತಿಯನ್ನು ಹದಕ್ಕಿಳಿಸಿ ರಕ್ತಪಾತವಾಗದಂತೆ ನೋಡಿಕೊಳ್ಳಲು ಎಲ್ಲಕ್ಕಿಂತಲೂ ಮುಖ್ಯವಾಗಿ ದೈವಾನುಗ್ರಹ ಪೂರ್ಣಯುಕ್ತವಾದ ಆತ್ಮತೇಜಸ್ಸಿದ್ದರೆ ಮಾತ್ರ ಸಾಧ್ಯವು. ಇಂಥ ಆತ್ಮತೇಜಸ್ಸುಳ್ಳವರೇ ಎಲ್ಲರ ಮನ

ವನ್ನು ಮೆಚ್ಚಿಸಿ ತಮ್ಮ ಉಪದೇಶದಿಂದ ಜನಗಳಲ್ಲಿ ಸತ್ಪರಿಣಾಮವನ್ನು ಉಂಟುಮಾಡಲು ಶಕ್ತರಾದ ಪ್ರವಾದಿಗಳೆನಿಸುವರು.

ದಾಸರು ಶ್ರೇಷ್ಠ ಪ್ರವಾದಿಗಳಲ್ಲೊಬ್ಬರೆಂಬುದನ್ನು ಅವರ ಚರಿತ್ರೆಯಿಂದಲೇ ನಾವು ಧಾರಾಳವಾಗಿ ತಿಳಿಯಬಹುದು.

ಅಲ್ಲದೆ ದಾಸರಲ್ಲಿ ಗಾನ ನೈಪುಣ್ಯವೂ ಇದ್ದುದರಿಂದ 'ಶಿಶುರ್ವೇತ್ತಿ, ಪಶುರ್ವೇತ್ತಿ ವೇತ್ತಿ ಗಾನರಸಂ ಫಣೀ' ಎಂಬಂತೆ ಎಂತಹ ಕಟುಕರ ಹೃದಯದಲ್ಲೂ ಕರುಣೆಯ ಹನಿಯನ್ನು ಇಳಿಸಲು ಇನ್ನೂ ಅವರಿಗೆ ಅನುಕೂಲವಾಯ್ತು. ಶ್ರೀಕೃಷ್ಣನ ಮುರಳೀ ಗಾನದಿಂದಾಗಿ ಕೊರಡು ಪಲ್ಲವಿಸಿತು, ಬರಡು ಹಯನಾಯ್ತು. ಶ್ರೀಮನ್ಮಧ್ವಾಚಾರ್ಯರು ತಮ್ಮ ಗಾನ ನೈಪುಣ್ಯದಿಂದ ಹಾಳುಬಿದ್ದಿದ್ದ ಒಂದು ತೋಟವನ್ನು ಫಲಭರಿತವನ್ನಾಗಿ ಮಾಡಿದರು. ತಾನಸೇನನು ಮದಗಜವನ್ನು ಗಾನದಿಂದಲೇ ಹದಕ್ಕೆ ತಂದನು. ಮೊದಲಾದ ಕಥೆಗಳನ್ನು ನಾವು ಭಾಗವತ ಭಾರತಾದಿ ಪುರಾಣಗಳಿಂದಲೂ ಚರಿತ್ರೆಯಿಂದಲೂ ತಿಳಿಯಬಹುದು. ಅಂದಮೇಲೆ ಪೂರ್ವದಲ್ಲಿ ನಾರದರ ಗಾನಕ್ಕೆ ಮೆಚ್ಚಿ ದೇವತೆಗಳು 'ಮಹತೀ' ಎಂಬ ವೀಣೆಯನ್ನು ನಾರದರಿಗೆ ಪಾರಿತೋಷಕವಾಗಿ ಕೊಟ್ಟ ಕಥೆಯು ಪುರಾಣ ಪ್ರಸಿದ್ಧವಾಗಿರಲು ನಾರದಾಂಶ ಸಂಭೂತರಾದ ಪುರಂದರ ದಾಸರ ಗಾನನೈಪುಣ್ಯವೂ ಸಾಮಾನ್ಯವೇ! ಸಂಗೀತ ಶಾಸ್ತ್ರಕ್ಕೆ ಆಧಾರಸ್ತಂಭದಂತಿರುವ ಲಕ್ಷಣಗೀತೆಯನ್ನು ಬರೆದವರು ಶ್ರೀ ಪುರಂದರದಾಸರು.

ಹೀಗೆ ಆತ್ಮತೇಜಸ್ಸಿನೊಂದಿಗೆ ಗಾನನೈಪುಣ್ಯವು ಬೆರೆತು ಮಹಾ ಪ್ರವಾದಿಗಳೆನಿಸಿದ ಪುರಂದರ ದಾಸರು ಈ ವಿಷಮ ಪರಿಸ್ಥಿತಿಯಲ್ಲೂ ಶಾಂತಿಯನ್ನು ಕಾಪಾಡಿದುದರಲ್ಲಿ ಅಚ್ಚರಿಯೇನು?

ಆದರೆ ಈ ಕಥೆಯಿಂದಾಗಿ ದಾಸರಿಗೆ ಮತವೇ ಇರಲಿಲ್ಲವೆಂದು ತಿಳಿಯುವುದಲ್ಲ. ಮತವಿಲ್ಲದವನು ಮನುಷ್ಯನೆನಿಸಲಾರನು. ಅಂಥವನನ್ನು ದ್ವಿಪಾದ ಪಶು ಅಥವಾ ಒಂದು ವಿಶಿಷ್ಟ ಜಾತಿಯ ಯಂತ್ರವೆನ್ನಬೇಕಾಗುವುದು. ಪುರಂದರದಾಸರ ಹಿರಿಯರು ಭಾಗವತ ಸಂಪ್ರದಾಯದವ

ರಾಗಿದ್ದರೂ ಪುರಂದರದಾಸರು ಶ್ರೀ ವ್ಯಾಸರಾಯರಲ್ಲಿ ಮುದ್ರಾಂಕನಾದಿಗಳನ್ನು ಪಡೆದು ಮಧ್ವಮತದೀಕ್ಷಾಬದ್ಧರಾಗಿರುವುದು ಈ ಹಿಂದೆಯೇ ತಿಳಿಸಲಾಗಿದೆ. ಅಲ್ಲದೆ ದಾಸರೂ ಮಧ್ವಮತ ಪ್ರಚಾರಕರಾದವರಲ್ಲಿ ಮುಖ್ಯರಲ್ಲೊಬ್ಬರೆಂಬುದನ್ನೂ ನಾವು ದಾಸರ ಕೃತಿಗಳಿಂದಲೇ ತಿಳಿಯಬಹುದು. 'ಮತದೊಳಗೆ ಒಳ್ಳೆಮತ ಮಧ್ವಮತವು' 'ಮಧ್ವರಾಯರ ಕರುಣೆಪಡೆಯದ ಮನುಜನು ಇದ್ದರೇನು ಇಲ್ಲದಿದ್ದರೇನು' 'ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ ಬಿಡಬೇಡಿ' ಮೊದಲಾದ ಪದ್ಯಗಳೇ ಸಾಕ್ಷಿ. ದಾಸರು ಹೆಸರಿಗೆ ಮಾತ್ರ ಮಾಧ್ವರಾಗಿದ್ದವರಲ್ಲ. ಮಧ್ವಮತ ದೀಕ್ಷಾಬದ್ಧರಲ್ಲಿ ಅಗ್ರಗಣ್ಯರಲ್ಲೊಬ್ಬರು. ಆದರೆ ಮತವೈಷಮ್ಯದಿಂದಾಗಿ ನೆಮ್ಮದಿಭಂಗವಾಗಬಾರದೆಂದು ದಾಸರು ಈ ವಿಷಮ ಪರಿಸ್ಥಿತಿಯನ್ನು ತಪ್ಪಿಸಿದರು.

## ದಾಸರೂ—ರಾಯನೂ

ದಾಸರು ಪಂಢರಾಪುರ ಸೊಲ್ಲಾಪುರಗಳೇ ಮೊದಲಾದ ಸ್ಥಳಗಳಲ್ಲೆಲ್ಲಾ ಸಂಚರಿಸಿ ಹಂಪೆಗೆ ಬಂದರು.

ರಾಜಾಸ್ಥಾನಗಳಿಂದ ಸನ್ಮಾನಿತರೂ ಆಗರ್ಭ ಶ್ರೀಮಂತರೂ ಆಗಿದ್ದ ಶ್ರೀನಿವಾಸ ನಾಯಕರು ಸರ್ವಸ್ವದಾನಮಾಡಿ ದಾಸರಾದ ಸಮಾಚಾರವನ್ನು ಕೃಷ್ಣದೇವರಾಯನು ಮೊದಲೇ ಕೇಳಿದ್ದನು. ಈಗ ದಾಸರು ಹಂಪೆಗೆ ಬಂದಿರುವುದನ್ನು ತಿಳಿದು ವ್ಯಾಸರಾಯರೂ ಆಗ ಹಂಪೆಯಲ್ಲೇ ಇದ್ದುದರಿಂದಲೂ ಅವರ ಬಳಿಯಲ್ಲೇ ದಾಸರೂ ಇರುವರೆಂದು ತಿಳಿದ ರಾಯನು ಮಠಕ್ಕೆ ಬಂದನು. ಕನಕದಾಸರೂ ಆಗ ಅಲ್ಲೇ ಇದ್ದರೆಂದೂ ತಿಳಿದು ಬರುವುದು. ರಾಯನಿಗೆ ಕನಕದಾಸರೂ ಅಲ್ಲೇ ಇರುವುದು ತಿಳಿದುಬಂದ ಮೇಲೆ ಇನ್ನೂ ಸಂತೋಷವಾಯ್ತು. ರಾಯನು ಬರುವಾಗ ವ್ಯಾಸರಾಯರೂ ಪುರಂದರದಾಸರೂ ಕನಕದಾಸರೂ ಹರಿಭಜನೆಯಲ್ಲಿ ತಲ್ಲೀನರಾಗಿದ್ದರು. ವ್ಯಾಸರಾಯರೂ ದಾಸರೂ ದೇವರೆದುರಿನಲ್ಲೇ ಭಜನೆಮಾಡುತ್ತಿದ್ದರು. ಕನಕದಾಸರು ದೂರದಲ್ಲಿ ನಿಂತು ಕೈಚಪ್ಪಾಳೆ ಹಾಕುತ್ತಾ ಕುಣಿಯುತ್ತಿದ್ದರು. ತಾನು ಬರುವುದನ್ನು ತಿಳಿಸದೆ ರಾಯನು ಬಂದಿದ್ದನು.

ರಾಯನು ದೊಡ್ಡವರಿಂದ ತನಗೆ ಗೌರವವಾಗಬೇಕೆಂಬ ಇಚ್ಛೆಯಿಂದ ಬಂದವನಲ್ಲ, ಅವರ ಅನುಗ್ರಹವಾಗಬೇಕೆಂದು ಬಂದಿದ್ದನು. ಪುರಂದರ ದಾಸರನ್ನು ದೂರದಿಂದ ಕಂಡಾಗಲೇ ರಾಯನಿಗೆ ಪರಮಾಶ್ಚರ್ಯವಾಯ್ತು. ರಾಯನು ದಾಸರಾಗುವ ಮೊದಲು ಅನೇಕಬಾರಿ ಶ್ರೀನಿವಾಸ ನಾಯಕರನ್ನು ರಾಜಾಸ್ಥಾನಕ್ಕೆ ಕರೆಸಿದ್ದನು. ಆಗಿನ ನಾಯಕರೆಲ್ಲಿ ಈಗಿನ ದಾಸರೆಲ್ಲಿ? ಆಗ ಶ್ರೀಮಂತಿಕೆಯ ದರ್ಪವೂ ಜಿಪುಣತನದ ಪೂರ್ಣಕಳೆಯೂ ತುಂಬಿದ್ದ ಮೂರ್ತಿ! ಈಗ ಪರಮ ವೈರಾಗ್ಯಶಿಖಾಮಣಿಗಳಾಗಿ ಶಾಂತ ಕಳೆ ತುಂಬಿರುವ ಚಿತ್ರ! ಆಗ ಧನಲಕ್ಷ್ಮಿಯ ಜಪದಲ್ಲಿ ನಿರತರು! ಈಗ ಲಕ್ಷ್ಮೀ ವಲ್ಲಭನ ಪಾದಭಜಕರು. ಆಗ ಬೇರಾರ ಹಿತವನ್ನೂ ಸ್ವಪ್ನದಲ್ಲೂ ಬಯಸದಂತಹ ಸ್ವಾರ್ಥಾಗ್ರೇಸರರ ಲಕ್ಷಣದಿಂದ ತುಂಬಿದ್ದರು! ಈಗ ಪರಮ ವೈಷ್ಣವಲಾಂಛನದಿಂದೊಡಗೂಡಿ ಲೋಕಹಿತರತರಾದ ನಿಷ್ಕಾಮ ಯೋಗಿಗಳಾಗಿ ಕಂಗೊಳಿಸುತ್ತಿದ್ದಾರೆ. ರಾಯನು ದೂರದಿಂದಲೇ ದೇವರಿಗೂ ಗುರುಗಳಿಗೂ ದಾಸರಿಗೂ ವಂದಿಸಿ ಎಲ್ಲೊ ಒಂದು ಮೂಲೆಯಲ್ಲಿ ಯಾರಿಗೂ ಅರಿಯದಂತೆ ನಿಂತೇ ಇರಲು ಯಾರೋ ರಾಯನನ್ನು ಗುರುತಿಸಿ ವ್ಯಾಸರಾಯರಿಗೆ ತಿಳಿಸಿದರು. ವ್ಯಾಸರಾಯರು ಸಮೀಪಕ್ಕೆ ರಾಯನನ್ನು ಬರಮಾಡಿಕೊಂಡು—

ಕೃಷ್ಣದೇವರಾಯರು ಬಂದು ಬಹಳ ಹೊತ್ತಾಯ್ತೆ!

**ಕೃಷ್ಣದೇವರಾಯ:**—ಭಜನೆಯಾಗುತ್ತಿರುವಾಗಲೇ ಬಂದೆ ಮಹಾಸ್ವಾಮಿ!

**ವ್ಯಾಸರಾಯರು:** ಹಾಗಾದರೆ ನಮಗಾಗಿ ಬಹಳ ಹೊತ್ತು ಕಾದಿರಿ!

**ಕೃ:**—ಇಂತಹ ಸನ್ನಿವೇಶದಲ್ಲಿ ಭಾಗಿಯಾಗಿ ನಾನು ಧನ್ಯನಾದೆನು!

**ವ್ಯಾ:**—ಲೌಕಿಕ ಕಾರ್ಯ ಗೌರವವೆಷ್ಟಿತ್ತೋ ಏನೋ?

**ಕೃ:**—ಅದರಿಂದ ಸ್ವಲ್ಪ ಹೊತ್ತಾದರೂ ದೂರಾಗಿದ್ದುದೇ ಭಾಗ್ಯವೆಂದು ತಿಳಿಯುತ್ತೇನೆ.

**ವ್ಯಾ:**—ನೋಡಿದಿರೋ ನಮ್ಮ ದಾಸರನ್ನು?

**ಕೃ:** ಅದಕ್ಕಾಗಿ ಬಂದಿರುವೆನು.

ಹೀಗೆ ರಾಯನು ಶ್ರೀಗಳವರೊಡನೆ ಸಮಯೋಚಿತವಾದ ನಾಲ್ಕು ಮಾತುಗಳನ್ನಾಡಿ ಗುರುಗಳಿಂದ ಮಂತ್ರಾಕ್ಷತೆಯನ್ನು ಪಡೆದು ಗುರುಗಳ ಅಪ್ಪಣೆಯನ್ನೂ ಪಡೆದು ದಾಸರನ್ನು ತನ್ನ ಮನೆಗೆ ಬರುವಂತೆ ಪ್ರಾರ್ಥಿಸಿ ಕರೆತಂದನು. ಯಥೋಚಿತವಾಗಿ ಸತ್ಕರಿಸಿ ರಾಯನು ಏಕಾಂತದಲ್ಲಿ ದಾಸರನ್ನು ಕುಳ್ಳಿರಿಸಿಕೊಂಡು ಅವರಿಗುಂಟಾದ ಭಗವದನುಭವಗಳನ್ನು ಕೇಳಿ ಪರಮಾನಂದ ಭರಿತನಾದನು. ದಾಸರೇ! ನಿಮ್ಮ ಭಾಗ್ಯವೇ ಭಾಗ್ಯ ವೆಂದನು. ಆಗ ದಾಸರು 'ನಿಜ! ನಿಜ! ಸಾರ್ವಭೌಮರ ಮಾತು ಅಕ್ಷರಶಃ ಸ್ತುತ್ಯವಾಗಿವೆ'. ಎಂದವರೇ—

**ರಾಗ ಧನ್ಯಾಸಿ ಆದಿತಾಳ**

ನಮ್ಮ ಭಾಗ್ಯ ದೊಡ್ಡದೋ ನಿಮ್ಮ ಭಾಗ್ಯ ದೊಡ್ಡದೋ || ಪ ||
ಸಮ್ಮತಿಯಿಂದ ನಾವೂ ನೀವೂ ಸಾಟಿಮಾಡಿ ನೋಡುವ ಬನ್ನಿ || **ಅ** || **ಪ** ||

ಸರಕು ತುಪ್ಪ ಧವಸ ಧಾನ್ಯ ಸವೆದಾವೆಂಬ ಚಿಂತೆಯುಂಟು |
ಹರಿನಾಮಾಮೃತ ಸಾರಕ್ಕೆ ಯಾರ ಅಂಜಿಕೆಯಿಲ್ಲವು || ೧ ||

ವ್ಯಾಪಾರ ಉದ್ಯೋಗಕ್ಕಿನ್ನು ಅಪಾರ ಅಂಜಿಕೆಯುಂಟು
ಗೋಪಾಳ ಮಾಡುವುದಕ್ಕಿನ್ನು ಯಾರ ಅಂಜಿಕೆಯಿಲ್ಲವು || ೨ ||
ಕಡಗ ಕಂಠಮಾಲೆಗಿನ್ನು ತುಡುಗರ ಅಂಜಿಕೆಯುಂಟು
ಅಡವಿತುಳಸೀ ಮಾಲೆಗಿನ್ನು ಯಾರ ಅಂಜಿಕೆಯಿಲ್ಲವು || ೩ ||

ಹೆಣ್ಣು ಹೊನ್ನು ಮಣ್ಣಿಗಿನ್ನು ಕಣ್ಣಿಡುವವರ ಅಂಜಿಕೆಯುಂಟು
ಪನ್ನಗಶಯನನ ನಾಮಕ್ಕ್ಯಾರ ಅಂಜಿಕೆಯಿಲ್ಲವು || ೪ ||

ನಿಮ್ಮ ಭಾಗ್ಯ ಲಕ್ಷ್ಮೀದೇವಿ ನಮ್ಮ ಭಾಗ್ಯ ನಾರಾಯಣ
ನಮ್ಮ ಪುರಂದರ ವಿಠ್ಠಲನ ಅನುದಿನ ಸ್ಮರಿಸುವ ಭಾಗ್ಯ || ೫ ||

ವೈರಾಗ್ಯ ಭಾಗ್ಯದ ವೈಶಿಷ್ಟ್ಯವನ್ನು ಮನ ಮುಟ್ಟುವಂತೆ ತಿಳುಹಿಸಿದರು. ದಾಸರನ್ನು ಮನದಣಿಯೆ ಅಭಿನಂದಿಸಿ, ದಾಸರ ದಿವ್ಯಾನುಭವ

ದುಪದೇಶ ವಾಕ್ಯಗಳಿಗೆ ಮುಗ್ಧನಾದ ರಾಯನು ಅತ್ಯಂತ ಭಕ್ತಿಯಿಂದ ಅನೇಕ ವಸ್ತ್ರಾಭರಣಗಳಿಂದ ದಾಸರನ್ನು ಸನ್ಮಾನಿಸಿ ಬೀಳ್ಕೊಟ್ಟನು.

ದಾಸರು ತಮಗೆ ರಾಜನಿಂದ ದೊರೆತ ವಸ್ತ್ರಾಭರಣಗಳನ್ನೆಲ್ಲಾ ಮಾರ್ಗದಲ್ಲಿ ತಮ್ಮ ದೃಷ್ಟಿಗೆ ಬಿದ್ದ ಸತ್ಪಾತ್ರರಾದ ಬಡಬಗ್ಗರಿಗೆ ಹಂಚಿ ಮಠಕ್ಕೆ ಬಂದರು.

ಈ ಸಂಗತಿ ರಾಜನಿಗೆ ತಿಳಿಯಿತು. ತಾನು ಸಮರ್ಪಿಸಿದ ಬಹು ಮಾನದಲ್ಲಿ ಯಾವ ನ್ಯೂನತೆಯಾಯ್ತೋ ಏನೋ ಎಂದು ಬಹುವಾಗಿ ಪರಿ ತಪಿಸಿ, ದಾಸರನ್ನೇ ಮತ್ತೊಮ್ಮೆ ಸಂದರ್ಶಿಸಿ ಕ್ಷಮಾಯಾಚನೆಯನ್ನು ಮಾಡಿಬಿಡುವುದೆಂದುಕೊಂಡು ದಾಸರ ಬಳಿಗೆ ಪುನಃ ಬಂದನು. ಜ್ಞಾನಿ ಗಳಾದ ದಾಸರು ರಾಯನ ಬರವಿನ ಕಾರಣವನ್ನು ಅರಿತು ರಾಯನನ್ನು ಪ್ರೇಮದಿಂದ ಬರಮಾಡಿಕೊಂಡು ತಮ್ಮ ಬಳಿಯಲ್ಲೇ ಕೂಡಿಸಿಕೊಂಡು— 'ರಾಯರೇ! ನಿಮ್ಮ ಆತಿಥ್ಯದಲ್ಲಿ ಯಾವ ನ್ಯೂನತೆಯೂ ಬರಲಿಲ್ಲ. ನೀವಿತ್ತ ಧನಕನಕಾದಿಗಳು ಬಡವರಿಗೆ ಉಪಯೋಗವಾದುದರಿಂದ ಅಚ್ಯು ತನು ಪ್ರೀತನಾದನು' ಎಂಬುದಾಗಿ ಸಾಂತ್ವನ ವಾಕ್ಯಗಳಿಂದ ರಾಯನ ಮನಸ್ಸಿನ ಕಳವಳವನ್ನು ಕಳೆದರು. ರಾಯನಿಗೆ ದಾಸರಲ್ಲಿ ಮೊದಲಿಗಿಂತಲೂ ಅತ್ಯಧಿಕ ಗೌರವ ಬುದ್ಧಿಯುಂಟಾಯ್ತು. ದಾಸರ ಅಪ್ಪಣೆ ಪಡೆದು ಅರಮ ನೆಗೆ ತೆರಳಿದನು.

**'ಉದರ ವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶ ಭಕುತಿಯಿಲ್ಲ'** ಎಂಬುದಾಗಿ ವಿರಾಗಿಗಳ ವೇಷವನ್ನು ಹಾಕಿಕೊಂಡು ಪ್ರಪಂಚವನ್ನು ವಂಚಿಸುತ್ತಿರುವ ಮಿಥ್ಯಾಚಾರ ಧುರೀಣರಾದವರ ಆಚರಣೆ ಯನ್ನು ಖಂಡಿತೋಕ್ತಿಗಳಿಂದ ಖಂಡಿಸಿದ ದಾಸರಾಯರು ಸ್ವಯಂ ಸದಾ ಚಾರರತರಾಗಿ ನಿಜವಾದ ವೈರಾಗ್ಯ ಶಿಖಾಮಣಿಗಳಲ್ಲದಿದ್ದರೆ ದಾಸರು ಲೋಕಮಾನ್ಯರಾಗುತ್ತಿದ್ದರೇ! ಆಡಿದಂತೆ ನಡೆದುದರಿಂದಲೇ ಹರಿದಾಸರಿಗೆ ಕರ್ನಾಟಕ ಸಿಂಹಾಸನಾಧೀಶ್ವರರೂ ದಾಸರಾದರು.

ದಾಸರ ಚರಿತ್ರೆಯಲ್ಲಿ ಹೆಜ್ಜೆ ಹೆಜ್ಜೆಗೂ ಮಾನವನ ಉನ್ನತಿಗೆ ಕಾರಣವಾದ ಆಚರಣೆಯನ್ನು ನಾವು ಕಾಣಬಹುದು. ದಾಸರ ಪ್ರತಿಯೊಂದು ಕ್ರಿಯೆಯೂ ಮಾನವನಿಗೆ ಆದರ್ಶ.

## ದಾಸರು ತಿರುಪತಿಯಲ್ಲಿ

ಕರ್ಣಾಟಕ ಹರಿದಾಸರು ತಪ್ಪದೆ ಪ್ರತಿವರ್ಷದಲ್ಲೂ ತಿರುಪತಿಗೆ ಬ್ರಹ್ಮೋತ್ಸವದ ಸಮಯಲ್ಲಿ ಹೋಗುವುದು ಪದ್ಧತಿಯಾಗಿತ್ತು. ಇತ್ತೀಚೆಗೆ ಈ ಪದ್ಧತಿಯನ್ನು ಹರಿದಾಸರು ಬಿಡುತ್ತ ಬಂದಿರುವುದು ಶೋಚನೀಯವಾಗಿದೆ. ಪ್ರತಿಯೊಂದು ಪಂಥದವರೂ ತಮ್ಮ ತಮ್ಮ ಸತ್ಸಂಪ್ರದಾಯಗಳನ್ನು ತೊರೆಯುತ್ತ ಬಂದಿರುವುದು ಕಾಲದ ಮಹಿಮೆಯೋ ಏನೋ "ಕಾಲಾಯತಸ್ಮೈ ನಮಃ" ಎಂಬ ಉದ್ಗಾರದ ಮಾತೇ ಸಮಾಧಾನವಾಗಿ ಸಿಗುವುದಲ್ಲದೆ ಬೇರೆಯಿಲ್ಲ.

ಪದ್ಧತಿಯಂತೆ ದಾಸರೂ ತಮ್ಮ ಪತ್ನೀ ಪುತ್ರರನ್ನೂ ಶಿಷ್ಯರನ್ನೂ ಕೂಡಿಕೊಂಡೇ ಒಂದು ವರ್ಷ ತಿರುಪತಿಗೆ ಬ್ರಹ್ಮೋತ್ಸವಕ್ಕೆ ಬಂದರು. ಆಚಾರಿ ಶ್ರೀ ವ್ಯಾಸರಾಯರೂ ಕೃಷ್ಣದೇವರಾಯನೂ ತಿರುಪತಿಗೆ ಬಂದಿದ್ದರು. ಮೂವರು ಮಹಾತ್ಮರ ಸಮಾಗಮವಾಗುವುದೆಂದು ಜನ ಕಿಕ್ಕಿರಿದಿದ್ದರು.

ದಾಸರ ಪರಿಚಯವಿಲ್ಲದೇ ಇದ್ದುದರಿಂದ ತಾಳಪಾಕರು ದಾಸರನ್ನು ಗುಡಿಯೊಳಗೆ ಬಿಡಲಿಲ್ಲ, ತಡೆದರು. ತಾವು ಅಪ್ಪಣೆ ಕೊಡುವ ತನಕ ಕಾದಿರಬೇಕೆಂದರು. ಆಗ ದಾಸರು ಶ್ರೀನಿವಾಸನನ್ನು ಸ್ತುತಿಸಲು ಏಳು ಬಾಗಿಲುಗಳೂ ತಾವಾಗಿ ತೆರೆದವು. ತಡೆದವರು ಅಪರಾಧವಾಯಿತೆಂದರು. ದಾಸರ ಈ ಮಹಿಮೆಯನ್ನು ಶ್ರೀ ರಘುನಾಥ ಯತಿಗಳು ಹೀಗೆ ಅಪ್ಪಣೆ ಕೊಡಿಸಿರುವರು--- "ತಾಳಪಾಕರೆಲ್ಲ ಕೂಡಿ ವ್ಯಾಳಸಹಿತಾಗಿ

ಕೀಲುಗಳ ಹಾಕಿದರು ದ್ವಾರಗಳಿಗೆ ||
ಭಾಳಬಗೆ ಬಗೆ ದ್ವಾರ ದಾಸರು ತೆಗೆಯೆನಲು
ಖೂಳತನದಲಿ ದೇವರಾಜ್ಞೆಯಿಲ್ಲೆಂದರು ||

ಆಗ ದಾಸರೇನು ಮಾಡಿದರೆಂದರೆ - -

'ಆಗ ದಾಸರು ಬೇಗ ಕೈಮುಗಿದು ನಿಂದು ಭವ
ರೋಗ ವೈದ್ಯನ ಬಗೆ ಬಗೆಯಿಂದ ತುತಿಸಲು
ಭೋಗಿಶಯನನೆ ಬಂದು ಬಾಗಿಲುಗಳ ತೆರದ
ಹೀಗೇಳು ದ್ವಾರಗಳು ಏಳುನುಡಿಗೆ'

ಇದರಿಂದ ನಾವು ತಿಳಿಯಬಹುದು. ಮತ್ತು ತಿರುಪತಿಯಲ್ಲೂ ದಾಸರು ವರದನೆಂಬ ತಮ್ಮ ಮಗನನ್ನು ಕರೆದು ನೀರು ತಾರೆನ್ನಲು ಶ್ರೀನಿವಾಸನೇ ವರದನ ರೂಪದಿಂದ ಚಿನ್ನದ ಗಿಂಡಿಯಲ್ಲಿ ನೀರು ತಂದು ಟೊಣೆಸಿಕೊಂಡು ಹೋದನೆಂದು ಕಥೆಯಿದೆ. ರಘುನಾಥ ಯತಿಗಳು

'ಮಠದೊಳಗೆ ದಾಸರು ಭೋಜನವ ಮಾಡಿ ವೆಂ ।
ಕಟರಮಣನ ಯಜ್ಞಮಂಟಪದೊಳು ।
ವಿಠಲನ್ನ ಸ್ಮರಣೆಮಾಡುತ ರಾತ್ರಿ ಮಲಗಿರಲು ।
ಕಠಿಣತೃಷೆಯಾಗೆ ಎದ್ದು ಹಡುಕೆ ಜಲಪಾತ್ರಿಲ್ಲ ॥
ಹಾಗೆ ಕೂಗಲು ತಮ್ಮ ವರದನ ಬಾರೆಂದು ।
ವೇಗದಿಂ ಬಾಗಿಲವ ತೆರೆದು ಬಂದು ।
ಆಗ ಚಿನ್ನದಾಚಂಬು ಥಾಲಿನೀರನೆ ತುಂಬಿ ।
ಬ್ಯಾಗಸುತನ ರೂಪದಿಂದಂದುಕೊಡಲಾಗಿ ॥
ಜಲಕೊಂಡಾವಾಗ ಬಲುಪಾನವನುಮಾಡಿ ।
ಕಳೆದುಕೊಂಡಾ ತೃಷೆಯ ಬಾಧೆಯನ್ನೆಲ್ಲ ।
ಜಲಪಾತ್ರಿಕೊಂಡು ಶಿಟ್ಟಲಿ ಹೊಡೆಯೆ ತಲೆಮ್ಯಾಲೆ
ಒಲ್ಲೆ ಒಲ್ಲೆ ಅಪರಾಧ ಸ್ವಾಮಿದಯಮಾಡೆಂದ ॥
ಶಿರದಲ್ಲಿ ರಕ್ತವು ಸುರಿಯೆ ಗುಡಿಯ ಹೊಕ್ಕು
ಪರಮ ಆನಂದದಿಂ ನಿಂದ ಮೇಲೆ ॥
ಮರುದಿನೋದಯದಲ್ಲಿ ಅರ್ಚನೆಯ ಕಾಲದಲಿ
ಶಿರವನೋಡಲು ರಕ್ತ ಕಂಡರಾಗವರು ॥"

ದೇವರ ತಲೆಯಲ್ಲಿ ರಕ್ತವನ್ನು ಕಂಡು ದಾಸರು ಪ್ರಾಯೋಪವೇಶಕ್ಕೆ ಸಿದ್ಧರಾಗಲು

'ಆಚ್ಚರಿಯ ನೋಡಿ ಪ್ರಾಣಾಚಾರ ಬೀಳಲು
ಅಚ್ಯುತನು ಸ್ವಪ್ನದಲಿ ಬಂದು ತಾನು
ಅರ್ಚಕಗೆ ಪೇಳಿದನು ಹೆಚ್ಚಿನ ಚಂಬಿನಿಂದ
ಹುಚ್ಚದಾಸನೊಬ್ಬ ಬಡಿದನೆಂದು ||'

ಅರ್ಚಕನು ದಾಸರನ್ನು ಹುಡುಕಿ ಇದು ಪುರಂದರ ದಾಸರ ವ್ಯಾಪಾರವೆಂದು ತಿಳಿದು ದಾಸರನ್ನು ಪ್ರಾರ್ಥಿಸಿ ದೇವರ ಸಮೀಪಕ್ಕೆ ಕರೆದೊಯ್ಯಲು ವಿಗ್ರಹದ ತಲೆಯಿಂದ ನೆತ್ತರು ಸುರಿಯುವುದು ನಿಂತಿತಂತೆ.

ಆವಾಗ ಸಕಲ ಜನರೆಲ್ಲ ಆ ದಾಸರಿಗೆ
ಭಾವದಲಿ ನಮಿಸಿ ಸ್ತೋತ್ರ ಮಾಡಿ ||
ದೇವ ಮುನಿ ವಂದ್ಯನಾಮಹಿಮೆಗಳನು ದಾಸರೆ ಬಲ್ಲರು
ಕಾವ ಕೊಲ್ಲುವ ಸ್ವಾಮಿ ಹರಿಬಲ್ಲ ದಾಸರ ಮಹಿಮೆ ||"

ಎಂಬುದಾಗಿ ದಾಸರನ್ನು ಕೊಂಡಾಡಿ ಅನೇಕರು ದಾಸರಲ್ಲಿ ಅಮಿತ ಭಕ್ತಿಯುಕ್ತರಾದರು.

ವ್ಯಾಸರಾಯರೂ, ದಾಸರೂ, ರಾಯನೂ ಬೇರೆ ಬೇರೆ ಸ್ಥಳಗಳಲ್ಲಿ ತಮ್ಮ ತಮ್ಮ ಪರಿವಾರದೊಂದಿಗೆ ಬೀಡು ಬಿಟ್ಟಿದ್ದರು. ವ್ಯಾಸರಾಯರ ಮಠದಲ್ಲೂ ದಾಸರ ಬಿಡಾರದಲ್ಲೂ ಇನ್ನು ರಾಯನು ಬೀಡು ಬಿಟ್ಟಲ್ಲೂ ಸಂತರ್ಪಣೆಗಳು ಅವ್ಯಾಹತವಾಗಿ ನಡೆದಿತ್ತು. ದಾಸರು ಪ್ರತಿನಿತ್ಯ ಗೋಪಾಳಕ್ಕೆ ಹೋಗಿ ಬಂದು ಸಂತರ್ಪಣೆ ನಡೆಸುತ್ತಿದ್ದರು. ಸಂತರ್ಪಣೆಯ ಕಾಲದಲ್ಲಿ ತಾವೇ ತುಪ್ಪ ಬಡಿಸುತ್ತಿದ್ದರು. ಒಮ್ಮೆ 'ಅಪ್ಪಣ್ಣಾ ತುಪ್ಪದ ಬಿಂದಿಗೆ ತಾರೋ' ಎಂದು ಅಪ್ಪಣ್ಣನನ್ನು ಕರೆದರು. ಅಪ್ಪಣ್ಣ ಭಾಗವತ ಪಂಕ್ತಿ ಭಜನೆಯಲ್ಲಿ ಯಾವುದೋ ಪಂಕ್ತಿಯಲ್ಲಿದ್ದವನಿಗೆ ಕೇಳಿಸಲಿಲ್ಲ. ಶ್ರೀನಿವಾಸನೇ ಭಾಗವತನ ರೂಪದಿಂದ ಬಂದು ತುಪ್ಪದ ಬಿಂದಿಗೆಯನ್ನು

ತರಲು 'ನೀನೇ ಬಡಿಸಪ್ಪಾ' ಎಂದರು. ಶ್ರೀನಿವಾಸನೇ ಬಡಿಸಿದ ಮೇಲೆ ಕೇಳಬೇಕೇ ಎಷ್ಟು ಬಡಿಸಿದರೂ ತುಪ್ಪದ ಬಿಂದಿಗೆ ಬರಿದಾಗಲಿಲ್ಲ. ದ್ರೌಪದೀ ದೇವಿಯು ಪ್ರೀತಿಯಿಂದ ಕೊಟ್ಟ ಶಾಖಪತ್ರವನ್ನೇ ತಿಂದು ಪರೀಕ್ಷೆಗೆ ಬಂದ ದೂರ್ವಾಸರಿಗೂ, ಅವರೊಂದಿಗೆ ಬಂದ ಅರವತ್ತು ಸಾವಿರ ಮಂದಿ ಶಿಷ್ಯರಿಗೂ ಅಕ್ಷಯಾನ್ನವನ್ನಿತ್ತವನು, ಸಭೆಯಲ್ಲಿ ದ್ರೌಪದಿಗೆ ಅಕ್ಷಯ ವಸ್ತ್ರವನ್ನಿತ್ತವನು, ಹೆಚ್ಚೇನು ಅಕ್ಷಯ ಫಲಪ್ರದನೇ ಬಡಿಸುವಾಗ ಅಕ್ಷಯ ವಾದುದರಲ್ಲಿ ಆಶ್ಚರಿಯೇನು? ದಾಸರು 'ಯಥೇಚ್ಛ ಬಿಡಿಸಿದೆಯಪ್ಪಾ ದೇವರ ಪ್ರೀತಿಯಾಯ್ತು' ಎಂದರು. ವೇಷಧಾರಿಯು ಮಾಯವಾದನು. ಭಾಗವತನು ಬರಲು 'ಅಪ್ಪಣ್ಣಾ ಇಷ್ಟೊಂದು ತುಪ್ಪವನ್ನು ಎಲ್ಲಿ ಸಂಗ್ರಹಿ ಸಿದೆಯಪ್ಪಾ ಇಂದು ನೀನು ತುಪ್ಪಬಡಿಸಿದಂತೆ ಯಾರೂ ಬಡಿಸಿರಲಾರರು' ಎನ್ನಲು ಅಪ್ಪಣ್ಣ—'ನಾನು ಈದಿನ ಪಂಕ್ತಿ ಭಜನೆಗೆ ಹೋಗಿದ್ದೆ ಬಡಿ ಸಲು ಬರಲೇ ಇಲ್ಲ' ಎಂದಾಗ ದಾಸರಿಗೆ ಪಂಢರಾಪುರದಲ್ಲಿ ಸ್ವಾಮಿಯು ಲೀಲೆ ಗೈದುದು ಸ್ಮರಣೆಗೆ ಬಂದು—'ಶ್ರೀನಿವಾಸ! ಅಲ್ಲಿ ನನ್ನಿಂದ ಟೊಣೆಸಿ ಕೊಂಡು ನನಗೆ ಕಶೆಯೇಟನ್ನು ದಯಪಾಲಿಸಿದಿ, ಇಲ್ಲಿಯೂ ನನ್ನಿಂದ ಟೊಣೆಸಿಕೊಂಡೆ. ನನಗಾಗಿ ನೀನೇತುಪ್ಪವನ್ನು ಬಡಿಸಿ ಇನ್ನೇನು ಮಾಡಬೇ ಕೆಂದಿರುವೆಯೋ ಮಾಡು ನಿನ್ನಿಚ್ಛೆ' ಎಂದು.—

### ರಾಗ ಭೈರವಿ ತಾಳ ಧಾಪು

ಎಂದಪ್ಪಿಕೊಂಬೆ ರಂಗಯ್ಯನ ಎಂದಪ್ಪಿಕೊಂಬೆ ‖ ಪ ‖
ಎಂದಪ್ಪಿಕೊಂಬೆ ನಾನೆಂದು ಮುದ್ದಾಡುವೆ ।
ಎಂದಿಗೆ ಸವಿಮಾತನಾಡಿ ನಾದಣಿವೆ ‖ ಅ ‖ ಪ ‖
ಅಪ್ಪಣ್ಣ ಭಾಗವತನ ರೂಪತಾನಾಗಿ
ತುಪ್ಪದ ಬಿಂದಿಗೆ ತಂದಪ್ಪ ಮುಕುಂದನ ‖ ೧ ‖
ಅಂದಿಗೆ ಕಿರುಗೆಜ್ಜೆ ಘಲಿರೆನ್ನೆ
ಛಂದಾಗಿ ಕುಣಿದ ಮುಕುಂದನ ಚರಣವ ‖ ೨ ‖

ಧರೆಯೊಳು ಸುಜನರ ಮರೆಯದೆ ಸಲಹುವ
ಪುರಂದರ ವಿಠಲನ ಸಿರಿಪಾದ ಪದುಮವ ॥ ೩ ॥

ಈ ಪ್ರಕಾರವಾಗಿ ಬಂಟರಿಗೆ ಬಂಟನಾದ ವೈಕುಂಠ ವಿಗ್ರಹನನ್ನು ಮನದಣಿಯೆ ಕೊಂಡಾಡಿದರು. ಸ್ವಾಮಿಯ ಭಜನೆಯಲ್ಲಿ ಮೈಮರೆತರು.

ಹೀಗೆ ಗಿರಿಯಲ್ಲಿ ಶ್ರೀನಿವಾಸನು ದಾಸರೊಡನೆ ಅನೇಕ ಸರಸವಾಡಿ ರುವನು. ಪಾಂಡವರ ಮನೆಯಲ್ಲಿ ಎಂಜಲು ಬಳಿದ-ಮಧ್ಯಪಾಂಡವನಿಗೆ ಬಂಡಿಬೋವನಾಗಿ ಕುದುರೆಗಳನ್ನು ತೊಳೆದ-ಆ ಸ್ವಾಮಿಗೆ ಈ ಪ್ರಕಾರ ತನ್ನವರೊಡನೆ ಆಟವಾಡುವುದೂ ಒಂದು ಲೀಲೆ. ನಿತ್ಯಾನಂದ ಮೂರ್ತಿಗೂ ಇದರಿಂದಾಗಿ ಆನಂದ ದೊರೆವುದೋ ಏನೋ!

ದಾಸರೊಡನೆ ಶ್ರೀನಿವಾಸನು ಇನ್ನನೇಕ ಲೀಲೆಗಳನ್ನು ತೋರಿದು ದನ್ನು ರಘುನಾಥಯತಿಗಳು—

'ನಾರದನೆ ತಾ ಬಂದು ಧಾರುಣಿಯ ವ್ಯಾಲೆ ಅವ
ತಾರವನು ತಾಮಾಡೆ ಇತರರಿಗೆ ಎಲ್ಲ ॥
ಪಾರಮಾರ್ಥವ ತೋರಿ ಉದ್ಧಾರ ಮಾಡುವೆನೆಂದು
ಈ ರೀತಿ ಪುರಂದರ ದಾಸರೆನಿಸಿದರು ॥

**ಈ ಪರಿಯ ಮಹಿಮೆಯನು ಕಂಡು ಆಗಿರಿ ವ್ಯಾಲೆ**
**ತಾಪತ್ರಯವ ಕಳೆದು ಈ ಪದವನು**
**ಪಾಪನಾಶನ ಮೂಲ ರಾಮ ವೇದವ್ಯಾಸರ**
**ಒಪ್ಪುವ ಭೃತ್ಯನಾದ ರಘುನಾಥ ಪೇಳಿದನು ॥**

ಕಂಡುದನ್ನು ಕಂಡಂತೆ ತಾವು ಹೇಳಿದುದೆನ್ನುತ್ತಾರೆ.

ಕೃಷ್ಣದೇವರಾಯನು ತಿರುಪತಿಯಲ್ಲಿ ಸ್ವಾಮಿ ಪುಷ್ಕರಿಣೀ ತೀರದಲ್ಲಿ ದಾಸರಿಗೆ ನಿತ್ಯಾಹ್ನಿಕಕ್ಕಾಗಿ ಒಂದು ಮಂಟಪವನ್ನು ಕಟ್ಟಿಸಿಕೊಟ್ಟಿರು ವನು. ಈಗ ಆ ಮಂಟಪವು ಭಂಗಿಮುಕ್ಕರಾದ ಬೈರಾಗಿಗಳ ಮಂಟಪ

ವಾಗಿ ರಾರಾಜಿಸುತ್ತಿದೆ. ಎಂದು ಕರ್ಣಾಟಕಾಂಬೆ ಕಂದೆರೆವಳೋ ಅಂದೇ ಕನ್ನಡಿಗರಭ್ಯುದಯಕ್ಕಾರಂಭವಾಗಬೇಕಲ್ಲವೆ?

## ಹರಿದಾಸರ ಹಿರಿಮೆ

ದಾಸರು ಹಂಪೆಗೆ ಪ್ರಥಮಬಾರಿ ಬಂದವರು ತುಂಗಭದ್ರಾ ತೀರದ ಪ್ರಶಾಂತ ವಾತಾವರಣವನ್ನು ಕಂಡು ಅಲ್ಲಿನ ರಮಣೀಯತೆಗೆ ಮನ ಸೋತು ಮುಂದೆ ಹೆಚ್ಚಿನ ಕಾಲವನ್ನು ಅಲ್ಲಿಯೇ ಕಳೆಯ ಬಯಸಿದರು. ಪಂಪಾಕ್ಷೇತ್ರವೇ ರಾಮಭಕ್ತರ ಊರು. ರಾಮಚರಣ ಕಿಂಕರರ ಪಾದ ಧೂಳಿಯಿಂದ ಪವಿತ್ರವಾದ ಪ್ರದೇಶವದು. ಅಲ್ಲದೆ ರಾಮಭಕ್ತಾಗ್ರೇಸರ ನಾದ ಶ್ರೀಮದಾಂಜನೇಯನಿಗೆ ರಾಮದೇವರು ಪ್ರೇಮಾಲಿಂಗನವನ್ನಿತ್ತು ಬ್ರಹ್ಮಪದವಿಯನ್ನಿತ್ತ ಸ್ಥಳವದು. ಅಲ್ಲಿ ನದೀತೀರದಲ್ಲಿ ಸ್ವಲ್ಪಹೊತ್ತು ವಿಶ್ರಮಿಸಿಕೊಂಡಾಕ್ಷಣ ಪುರಾಣಪ್ರಿಯರಿಗೂ ಕಾವ್ಯರಸಾಸ್ವಾದನಾ ನಿರತ ರಾದ ಸಾಹಿತಿಗಳಿಗೂ ಆದಿಕವಿ ವಾಲ್ಮೀಕಿಯು ಚಿತ್ರಿಸಿದ ಶ್ರೀಮದ್ರಾಮಾ ಯಣ ಕಥೆಯು ಕಣ್ಣೆದುರಿಗೆ ನಡೆದಂತೆ ಕಾಣದಿರದು. ಚರಿತ್ರೆಯ ಕಾಲ ದಲ್ಲೂ ಕರ್ಣಾಟಕ ಸಿಂಹಾಸನಾಧೀಶ್ವರರ ತೌರೂರು. ಪರದೇಶದಿಂದ ಬಂದ ಯಾತ್ರಿಕರೂ ರಾಯಭಾರಿಗಳೇ ಮೊದಲಾದವರೂ ಆ ಹಂಪೆಯ ಪೆಂಪನ್ನೂ ಸಿರಿಯನ್ನೂ ಬಲುವಾಗಿ ಬಣ್ಣಿಸಿರುವರು. ವ್ಯಾಸರಾಯರು, ವಿದ್ಯಾರಣ್ಯರೇ ಮೊದಲಾದ ಯೋಗಿಗಳೂ ಮೆಚ್ಚಿದ ನಾಡು ಅದು. ವಿರೂ ಪಾಕ್ಷನು ತನ್ನ ಮೂರು ಕಣ್ಣಿನಿಂದಲೂ ಆ ಹಂಪೆಯನ್ನು ನೋಡುತ್ತಾ ಇಂದಿಗೂ ಭಕ್ತರನ್ನು ಸಲಹುತ್ತಿರುವನು. ಹಂಪೆಯ ವೈಭವವು ಗತವೈಭವ ವಾದರೂ ಇಂದಿಗೂ ಈ ಪುಣ್ಯ ಕ್ಷೇತ್ರವನ್ನು ಸಂದರ್ಶಿಸಿದವರ್ಯಾರೂ ಒಂದು ಕಾಲದಲ್ಲಿ ಇದು ಸಿರಿಯ ನೆಲೆವೀಡಾಗಿತ್ತು ಎಂಬುದನ್ನು ಮನಗಾಣದಿರ ಲಾರರು.

ದಾಸರು ಹಂಪೆಯಲ್ಲಿರುವಾಗ ಗಂಗಾದಿ ನದ್ಯಭಿಮಾನಿನೀ ದೇವತಾ ಸ್ತ್ರೀಯರುಗಳು ಅರುಣೋದಯಕ್ಕೆ ಮುನ್ನ ಬಂದು, ದಾಸರ ಮನೆಯ ಅಂಗಣವನ್ನು ಸಾರಿಸಿಗುಡಿಸಿ ಹೊಸ್ತಿಲಲ್ಲಿ ರಂಗವಲ್ಲಿಯನ್ನಿಕ್ಕಿ ಒಂದು ಬುಟ್ಟಿ

ಯಲ್ಲಿ ದಾಸರಿಗೆ ದೇವತಾರ್ಚನೆಗಾಗಿ ಫಲಪುಷ್ಪಗಳನ್ನು ಅಣಿಮಾಡಿಟ್ಟು ಹೋಗತೊಡಗಿದರು. † ದಾಸರ ಧರ್ಮಪತ್ನಿಗೆ ಪರಮಾಶ್ಚರ್ಯವಾಯ್ತು. ಪ್ರತಿದಿನದಲ್ಲೂ ತಾವೆದ್ದು ಪತಿಪಾದ ಪದ್ಮಗಳನ್ನು ಕಣ್ಣಿಗೊತ್ತಿಕೊಂಡು ಮುಖಮಾರ್ಜನಕ್ಕೆ ಮನೆಯಿಂದ ಹೊರಗೆ ಬರುವಷ್ಟರಲ್ಲೇ ಇಷ್ಟೆಲ್ಲಾ ಸಿದ್ಧತೆಮಾಡಿಡುವವರಾರೆಂಬುದನ್ನು ಕಂಡುಹಿಡಿಯಬೇಕೆಂಬ ಕುತೂಹಲವು ಅವರಲ್ಲಿ ಹೆಚ್ಚಿ, ಒಂದು ರಾತ್ರಿ ನಿದ್ರಾವಶರಾಗದೆ ಮನೆಯ ಬಾಗಿಲಲ್ಲೇ ಕಾದುಕುಳಿತರು. ಎಂದಿನಂತೆ ಅರುಣೋದಯಾತ್ಪೂರ್ವದಲ್ಲೇ ಗಂಗಾದಿ ನದ್ಯಭಿಮಾನಿನೀ ನಾರಿಯರು ಬಂದರು. ಪ್ರಕಾಶಯುಕ್ತೆಯ ರಾಗಿ ಸರ್ವಾಲಂಕಾರ ಸಹಿತೆಯರಾಗಿ ಬರುತ್ತಿರುವ ಆ ದೇವತಾನಾರಿಯ ರನ್ನು ದೂರದಿಂದಲೇ ಕಂಡ ಸರಸ್ವತೀ ಬಾಯಿಯವರು ಓಡೋಡುತ್ತ ಹೋಗಿ ಅವರ ಪಾದಗಳ ಮೇಲೆ ಬಿದ್ದು 'ಹಿರಿಯ ಮುತ್ತೈದೆಯರೇ ನೀವು ಯಾರು? ಮಂಗಳೆಯರೇ ನಿಮ್ಮನ್ನು ಕಂಡರೆ ಮನುಷ್ಯ ಸ್ತ್ರೀಯ ರಂತೆ ಕಾಣುವುದಿಲ್ಲ, ನಿಜವನ್ನು ತಿಳಿಸಿ ಅನುಗ್ರಹಿಸ ಬೇಕು!' ಎನಲು ಆ ದೇವಿಯರು 'ನಾವು ಗಂಗಾದಿ ನದ್ಯಭಿಮಾನಿನೀ ದೇವತಾ ಸ್ತ್ರೀಯರು ಗಳು. ಹರಿಭಕ್ತಾಗ್ರೇಸರರಾದ ನಿಮ್ಮ ಪತಿಯ ಸೇವೆಯನ್ನು ಮಾಡಿ ಪಾಪಿಗಳು ನಮ್ಮಲ್ಲಿ ತೊಳೆದುಕೊಂಡು ಬಿಟ್ಟುಹೋದ ಪಾಪವನ್ನು ಕಳೆದು ಕೊಳ್ಳಲು ನಿತ್ಯವೂ ಬರುತ್ತಿರುವೆವು. ನಿಮ್ಮಂಥವರ ಸೇವೆಯಿಂದ ನಾವು ಕೃತಾರ್ಥರಾಗುವೆವು. ಹರಿದಾಸರಿದ್ದುದೇ ಪುಣ್ಯಕ್ಷೇತ್ರವು. ಅವರಿದ್ದ ಲ್ಲಿಯೇ ಶ್ರೀಹರಿಯು ತನ್ನ ಸಕಲ ಪರಿವಾರ ಸಹಿತ ಸದಾ ಸನ್ನಿಹಿತನಾಗಿ ರುವನು. ಅವರ ಸೇವೆಯೇ ಹರಿಸೇವೆ. ಅವರ ಅನುಗ್ರಹವೇ ಶ್ರೀಹರಿಯ ಅನುಗ್ರಹಕ್ಕೆ ದಾರಿ ಇನ್ನು ನಮಗೆ ಅಪ್ಪಣೆ ಕೊಡಿ' ಎಂದಂದು ಕಣ್ಮುಚ್ಚಿ ತೆರೆಯುವಷ್ಟರಲ್ಲೇ ಎಂದಿನಂತೆ ಗುಡಿಸಿ ಸಾರಿಸಿ ರಂಗವಲ್ಲಿಯನ್ನಿಕ್ಕಿ ಫಲ ಪುಷ್ಪಗಳನ್ನು ಅಣಿಮಾಡಿಟ್ಟು ಅದೃಶ್ಯರಾದರು. ಸರಸ್ವತೀ ಬಾಯಿಯವರು ಮಂತ್ರಮುಗ್ಧರಂತೆ ಅವರ ಮಾತನ್ನಾಲಿಸುತ್ತಾ ಇದ್ದವರು ಅವರು ಅದೃಶ್ಯ ರಾಗಲು ತನ್ನ ಪತಿಯ ಭಾಗ್ಯವಿಶೇಷವನ್ನು ನೆನೆನೆನೆದು ತನುಪುಳ ಕಾಂಕಿತರಾದರು.

---

† ಈ ವಿಷಯದಲ್ಲಿ ಅಪರೋಕ್ಷಿಗಳ ಅನೇಕ ಪ್ರಮಾಣಾದಿಗಳಿವೆ.

ಪುರಂದರ ದಾಸರು ಹರಿದಾಸರಾಗುವುದರ ಮೊದಲು ಅವರ ದರ್ಶನಕ್ಕೆ ಬರುತ್ತಿದ್ದವರೆಲ್ಲಾ ಹೆಚ್ಚಿನವರು ಸ್ವಕಾರ್ಯ ಸಾಧನೆಗಾಗಿಯೂ ನಾಯಕರ ಹಂಗಿಗಾಗಿಯೂ ಬರುತ್ತಿದ್ದರೇ ಹೊರತು ನಾಯಕರಲ್ಲಿ ಅಂಥವರಿಗೆ ಪ್ರೇಮ ಹೇಗೆ ಬರಬೇಕು. ನಾಯಕರಿಗೂ ಯಾರ ಪ್ರೇಮವೂ ಬೇಕಾಗಿರಲಿಲ್ಲ. ಯಾರಲ್ಲೂ ಅಭಿಮಾನವಿರಲಿಲ್ಲ. ಧನದ ಮೇಲಿನ ಅಭಿಲಾಷೆಯಿಂದ ಧನವಂತರನ್ನು ಮಾತ್ರ ಆದರಿಸುತ್ತಿದ್ದರು. ನಾಯಕರಲ್ಲಿ ಕೆಲಸಕ್ಕಿದ್ದವರೂ ತಮ್ಮ ಕೆಲಸ ಎಷ್ಟೋ ಅಷ್ಟೇ ಮಾಡುವವರು. ನಾಯಕರು ನವಕೋಟಿನಾರಾಯಣರೆನಿಸಿರುವಾಗ ಬೆಲೆ ಅವರಿಗಲ್ಲ, ಅವರಲ್ಲಿದ್ದ ಧನಕ್ಕೆ. ಶ್ರೀಮಂತರೆಲ್ಲರೂ ಇದನ್ನು ಮರೆಯಬಾರದು. ನಾಯಕರು ಹರಿದಾಸರಾದ ಮೇಲೆ ಇವರ ದರ್ಶನ, ಸೇವಾ ಭಾಗ್ಯಗಳು ತಮಗೆ ಯಾವಾಗ ದೊರೆಯುವುದೋ ಎಂಬ ಅಭಿಲಾಷೆಯಿಂದ ಕಾದಿರುವಂತಹ ಮಹತ್ವದವೀಧರರಾದರು.

ಹರಿದಾಸರಾಗುವುದೇ ಪರಮ ಭಾಗ್ಯವೆಂದು ಶ್ರೀ ವಿಜಯದಾಸವರ್ಯರು **'ದಾಸನಾಗುವುದು ಅಶೇಷ ಜನುಮದ ಪುಣ್ಯ'** ವೆಂಬುದಾಗಿ ಅಪ್ಪಣೆ ಕೊಡಿಸಿರುವರು.

ಶ್ರೀ ಮದ್ವಾದಿರಾಜ ಸ್ವಾಮಿಗಳು ಹರಿಭಕ್ತಾಷ್ಟಕದಲ್ಲಿ

**ಶ್ರೀ ಮಧ್ವ ಶುದ್ಧರಾದ್ಧಾಂತ ಭೂತಯೋ ಧೃತನೇಮಯಃ**

**ಮಹಾಂತೋ ಹರಿಸಂತೋಷಕರಾಃ ಕ್ಲೇಶಹರಾಮಮ ॥'**

ಎಂಬುದಾಗಿ ಹರಿಭಕ್ತರು ಕ್ಲೇಶ ಪರಿಹಾರಕರೆಂದು ಸಾರಿರುವರು.

ನಾರಾಯಣಪ್ಪನು ಕನ್ನಡ ಭಾಮಿನಿಷಟ್ಪದಿ ರೂಪದಲ್ಲಿ ಮಹಾಭಾರತವನ್ನು ಬರೆದು ಪುರಂದರ ದಾಸರ ಅವಗಾಹನೆಗೆ ತಂದನು. ಬಂದ ನಾರಾಯಣಪ್ಪನನ್ನು ದಾಸರು ಯಥೋಚಿತವಾಗಿ ಸತ್ಕರಿಸಿ, ಅವನು ಬರೆದ ಭಾರತವನ್ನು ಅವನಿಂದಲೇ ಓದಿಸಿಕೇಳಿ ಆನಂದ ಪರವಶರಾಗಿ ಬಿಗಿದಪ್ಪಿಕೊಂಡು 'ಶ್ರೀ ವೇದವ್ಯಾಸ ದೇವರಿಗೆ ಸಮ್ಮತವಾಗಿದೆ; ಹರಿಗುರುಗಳು ಪರಮಸಂತುಷ್ಟರಾದರು. ಕವಿಶ್ರೇಷ್ಠನೇ ನೀನು ಇನ್ನುಮೇಲೆ **'ಕುಮಾರ**

**ವ್ಯಾಸ'**ನೆಂದೇ ಖ್ಯಾತನಾಗು! ನಿನ್ನಂತಹ ಹರಿಭಕ್ತರು ನನ್ನ ಮನೆಗೆ ಬಂದುದೇ ನಮ್ಮ ಪರಮಭಾಗ್ಯವು' ಎಂದಂದು—

**ಉಗಾ ಭೋಗ**

'ಹರಿಶರಣರೆನ್ನ ಮನೆಯ ಮೆಟ್ಟಲು ಪಾವನವಾಯಿತು. ಆ ಆ ಆ ಆ
ಹರಿಶರಣರೆನ್ನ ಕೂಡೆ ಮಾತಾಡೆ ಎನ್ನ ತನುಮನ ಪಾವನವಾಯಿತು
ಆ ಆ ಆ ಆ
ಹರಿಶರಣರೆನ್ನ ಮನೆಯಲ್ಲುಂಡರೆ ಎನ್ನ ಎನ್ನ ಇಪ್ಪತ್ತೊಂದು ಕುಲ
ಪಾವನವಾಯಿತು. ಆ ಆ ಆ ಆ

ಹರಿಶರಣರೆ ಗತಿ ಹರಿಶರಣರೆ ದೆಶೆ ಆ ಆ ಆ ಆ
ಹರಿಶರಣರೊಲಿದರೆ ಪುರಂದರ ವಿಠಲನೊಲಿವ ಆ ಆ ಆ ಆ ||'

ಎಂಬುದಾಗಿ ಹಾಡಿಹರಸಿದರು. ನಾರಾಯಣಪ್ಪನು ದಾಸರ ಅನುಗ್ರಹವನ್ನು ಹೊಂದಿ ಕುಮಾರವ್ಯಾಸನೆಂಬ ಬಿರುದನ್ನೂ ಪಡೆದು ಸ್ವಸ್ಥಾನಕ್ಕೆ ತೆರಳಿರುವನು ಎಂಬುದಾಗಿ ಚರಿತ್ರೆಯಿಂದ ತಿಳಿದುಬರುವುದು.

ಈ ಕಥೆಯಿಂದಲೂ ಹರಿದಾಸರ ಹಿರಿಮೆಯು ಸೂಚಿತವಾಗುವುದು ಅಲ್ಲದೆ ಶ್ರೀ ಪುರಂದರ ದಾಸರೇ ಮತ್ತೊಂದು ಸಂದರ್ಭದಲ್ಲಿ

'ದಾಸನಾಗುವುದಕ್ಕೆ ಏಸು ಜನಮದ ಸುಕೃತ
ಭಾಸುರ ಕೋಟಿ ಶ್ರೀಶಗುಣವಂತ
ನಾಶರಹಿತ ನಿನ್ನ ದಾಸರ ದಾಸ್ಯ
ಲೇಸಾಗಿ ಕೊಡುಕಂಡ್ಯ ಪುರಂದರ ವಿಠಲ'

**ಮತ್ತು**—

'ತಂಬೂರಿ ಮೀಟಿದವ ಭವಾಬ್ಧಿ ದಾಟಿದವ
ತಾಳವ ಕಟೆದವ ಸುರರೊಳು ಸೇರಿದವ
ಗೆಜ್ಜೆಯ ಕಟ್ಟಿದವ ಖಳರೆದೆ ಮೆಟ್ಟಿದವ

ಗಾಯನವ ಮಾಡಿದವ ಹರಿಮೂರ್ತಿ ನೋಡಿದವ
ಪುರಂದರ ವಿಠಲನ ನೋಡಿದವ ವೈಕುಂಠಕೋಡಿದವ ||'

ಇನ್ನು —

ದಾಸನಾದವಗೆ ವೈಕುಂಠದಲ್ಲಿವಾಸ
ದಾಸನಾಗದವನೆಲ್ಲಿ ಪೋದರಾಭಾಸ
ದಾಸನೆಂದೆನಿಸಿದ ಭಾರತಿಯಗಂಡ
ಲೇಸಾಗಿ ಸತ್ಯಲೋಕವನಾಳ್ವ ಶೌಂಡ
ದಾಸರ ಹೃದಯದಿ ಮಿನುಗುವ ಶ್ರೀಶ
ವಾಸವಾದಿ ವಂದ್ಯ ದ್ವಿಸಾಸಿರಾಂಬಕ ಶರಣ್ಯ
ದಾಸರಿಗೊಲಿವ ಪುರಂದರ ವಿಠಲ'

ಎಂಬುದಾಗಿ ಹರಿದಾಸರ ಹಿರಿಮೆಯನ್ನು ಮನದಣಿಯೆ ಕೊಂಡಾಡಿರುವರು. ಹರಿದಾಸರು ಯಾವ ಕಾಲದಲ್ಲೂ ಲೋಕಪೂಜ್ಯರೇ. ಕಾಲವು ಅವರನ್ನು ಏನೂ ಮಾಡದು. ಅವರ ಆಚರಣೆಯಲ್ಲಿ ಕೊರತೆ ಬರದಿದ್ದರೆ ಸರಿ.

## ಶ್ರೀಕೃಷ್ಣ ಕಲಗಚ್ಚನ್ನು ಕುಡಿದ

ಒಂದು ದಿನ ವ್ಯಾಸರಾಯರು ಪೂಜಾಕಾಲದಲ್ಲಿ ದಾಸರನ್ನು ಕಾಣದೆ ಪರಿಚಾರಕನೊರ್ವನನ್ನು ಕಳುಹಿಸಿ ದಾಸರನ್ನು ಕರೆಸಿದರು. ಪರಿಚಾರಕನು ಬರುವಾಗ ದಾಸರು ದೇವರ ಪೂಜೆಯಲ್ಲಿದ್ದರು. 'ಸ್ವಾಮಿಗಳ ಆಜ್ಞೆಯಾಗಿದೆ ಈಕ್ಷಣ ಬರಬೇಕಂತೆ' ಎಂದ ಪರಿಚಾರಕನ ಮಾತು ಕಿವಿಗೆ ಬಿದ್ದಾಕ್ಷಣದಲ್ಲೇ ದಾಸರು ಧೂಪಾರತಿಯನ್ನು ಮಾಡಿ ಮುಗಿಸಿದ್ದರಷ್ಟೆ ಆದರೂ ಗುರುಗಳಾಜ್ಞೆ ಯಾವ ಮೇಲೆ ಸ್ವಲ್ಪವೂ ಸಾವಕಾಶಮಾಡಬಾರದೆಂಬ ಧರ್ಮಸೂಕ್ಷ್ಮದಂತೆ, ಇದ್ದ ಬದ್ದ ತುಳಸಿಯನ್ನೆಲ್ಲಾ ಒಂದೇಸಾರಿ 'ಶ್ರೀಕೃಷ್ಣಾಯನಮಃ' ಎಂದು ದೇವರ ಮೇಲೇರಿಸಿ ಹೊರಟೇಬಿಟ್ಟರು.

ಮಠಕ್ಕೆ ಬರುವಾಗ ಮಠದ ಅಡುಗೆಯವನು ಕಲಗಚ್ಚನ್ನು § ಚೆಲ್ಲುತ್ತಿದ್ದನು. ದಾರಿಯಲ್ಲಿ ಬರುತ್ತಿದ್ದ ಕಲಗಚ್ಚನ್ನು ಕಂಡ ದಾಸರು ತಾವು ಪೂಜೆಯಲ್ಲಿದ್ದವರು ದೇವರ ನೈವೇದ್ಯವನ್ನು ಮಾಡದೇ ಹೊರಟು ಬರುತ್ತಿದ್ದರಾದುದರಿಂದ ಆ ಕಲಗಚ್ಚನ್ನೇ 'ಶ್ರೀಕೃಷ್ಣ ನಿನ್ನ ಪ್ರೀತಿಯಾಗಲಿ' ಎಂದು ಸಮರ್ಪಿಸಿಬಿಟ್ಟರು.

ಇತ್ತ ವ್ಯಾಸರಾಯರು ಪೂಜಿಸುತ್ತಿದ್ದ ಶ್ರೀಕೃಷ್ಣ ವಿಗ್ರಹದ ಕಟಬಾಯಿಂದ ಕಲಗಚ್ಚು ಇಕ್ಕಡೆಗಳಲ್ಲೂ ಇಳಿಯಲಾರಂಭಿಸಿತು. ಇದನ್ನು ಕಂಡ ವ್ಯಾಸರಾಯರು ಆಶ್ಚರ್ಯದಿಂದ ಕರವಸ್ತ್ರದಿಂದ ವಿಗ್ರಹದ ಮುಖವನ್ನು ಎಷ್ಟುಬಾರಿ ಒತ್ತಿದರೂ ಕಲಗಚ್ಚು ಸುರಿಯುತ್ತಲೇ ಇತ್ತು. ಧ್ಯಾನದಿಂದ ವ್ಯಾಸರಾಯರು ಇದು ದಾಸರ ವ್ಯಾಪಾರವೆಂದು ತಿಳಿದು ವಿಗ್ರಹವನ್ನು ಕಣ್ತುಂಬನೋಡುತ್ತಾ ಆನಂದಪರವಶರಾಗಿ 'ಶ್ರೀಕೃಷ್ಣ! ನಿತ್ಯತೃಪ್ತನಾದ ನಿನಗೆ ಶಬರಿಯು ಕೊಟ್ಟ ಎಂಜಲು ಫಲಗಳೇ ಪಾವನವಾಯ್ತು, ಋಷಿಪತ್ನಿಯರು ಕೊಟ್ಟ ಅನ್ನವೇ ಷಡ್ರಸಾನ್ನವಾಯ್ತು, ಬಡಬ್ರಾಹ್ಮಣನು ಕೊಟ್ಟ ಹಿಡಿಯವಲಕ್ಕಿಯೇ ದಿವ್ಯಭೋಜ್ಯವಾಯ್ತು, ದ್ರೌಪದಿಯು ಅರ್ಪಿಸಿದ ಶಾಖಪತ್ರವೇ ಮೃಷ್ಟಾನ್ನವಾಯ್ತು, ವಿದುರನು ಕೊಟ್ಟ ಒಕ್ಕುಡಿತೆ ಹಾಲೇ ಅಮೃತವಾಯ್ತು ಎಂಬುದೆಲ್ಲಾ ಕಥೆಯಾಗಿತ್ತು; ಇಂದು ದಾಸರು ನಿವೇದಿಸಿದ ಕಲಗಚ್ಚನ್ನು ಕುಡಿದು ಸರ್ವಸಾರಭೋಕ್ತನಾದ ನೀನು ಭಕ್ತರು ಪ್ರೇಮದಿಂದ ನೀಡಿದ ಪದಾರ್ಥಗಳನ್ನು ಅತಿಪ್ರೇಮದಿಂದ ಸ್ವೀಕರಿಸುವವನು ಎಂಬುದು ಪ್ರತ್ಯಕ್ಷವಾಯಿತು' ಹೀಗೆ ನಾನಾ ಪ್ರಕಾರದಿಂದ ಶ್ರೀಕೃಷ್ಣನನ್ನು ಸ್ತುತಿಸುತ್ತಿರಲು ದಾಸರು ಬಂದು ದೇವರಿಗೆ ವಂದಿಸಿ 'ಶ್ರೀ ಗುರುಭ್ಯೋನಮಃ' ಎಂದು ವ್ಯಾಸರಾಯರಿಗೆವಂದಿಸಲು ಸ್ವಾಮಿಗಳು 'ಏನು ದಾಸರೇ ನಮ್ಮ ಶ್ರೀಕೃಷ್ಣನಿಗೆ ಕಲಗಚ್ಚನ್ನು ಕುಡಿಸಿ ಬಿಟ್ಟಿರಾ! ನಮ್ಮ ಸ್ವಾಮಿ ನಿಮ್ಮಂಥವರ ಕೈಕೂಸು. ಏನು ಮಾಡಿದರೂ ಸುಮ್ಮನಿರುವನಲ್ಲವೇ' ಎನ್ನಲು ದಾಸರು 'ಎಲ್ಲವೂ ಶ್ರೀಪಾದಾನುಗ್ರಹ'ವೆಂದಿಷ್ಟೇ

---

§ ಕಲಗಚ್ಚಿಗೆ ಅಕ್ಕಚ್ಚು ಎಂದೂ ಕೆಲವರಲ್ಲಿ ರೂಢಿಯಿದೆ. ಅಕ್ಕಿ ಅಥವಾ ಬೇಳೆ ಮೊದಲಾದವುಗಳನ್ನು ತೊಳೆದ ನೀರು ಎಂದು ತಿಳಿಯಬಹುದು.

ಹೇಳಿದರು. ದಾಸರು ಬಂದು ಸ್ವಲ್ಪ ಹೊತ್ತಿನಲ್ಲೇ ವಿಗ್ರಹದ ಬಾಯಿಂದ ಕಲಗಚ್ಚಿಳಿಯುವುದು ನಿಂತಿತು.

ದಾಸರು ಶ್ರೀಕೃಷ್ಣನಿಗೆ ಕಲಗಚ್ಚನ್ನು ಕುಡಿಸಿದ ಮಹಿಮೆಯನ್ನು ಶ್ರೀ ವಿಜಯದಾಸಾರ್ಯರಿಂದ ರಚಿತವಾದ ಸುಳಾದಿಯೊಂದರ ಜತೆಯಲ್ಲಿ ನಾವು ಕಾಣಬಹುದು –

'ಅಚ್ಯುತಾರ್ಪಿತವೆಂದು ದಾಸರೆನಲು ಕಲ
ಗಚ್ಚ ಕುಡಿದಕಾಣೋ ವಿಜಯ ವಿಠಲ ಮೆಚ್ಚಿ'

ಈ ಕಥೆಯಿಂದ ನಮಗೆ ಅನೇಕ ನೀತಿಗಳು ತಿಳಿಯುವುವು.

**'ಪತ್ರಂ ಪುಷ್ಪಂ ಫಲಂ ತೋಯಂ ಯೋಮೇ ಭಕ್ತ್ಯಾ ಪ್ರಯಚ್ಛತಿ ॥**
**ತದಹಂ ಭಕ್ತ್ಯುಪಹೃತ ಮಶ್ನಾಮಿ ಪ್ರಯತಾತ್ಮನಃ ॥'**

**ಗೀತಾ ॥ ೯—೨೬ ॥**

**ತಾ॥** (ಯಾವನು ಶಾಸ್ತ್ರನಿಷಿದ್ಧಗಳಲ್ಲದ ಪತ್ರವನ್ನು, ಪುಷ್ಪವನ್ನು, ಫಲವನ್ನು, ನೀರನ್ನು ನನಗೆ ಭಕ್ತಿಪೂರ್ವಕವಾಗಿ ಅರ್ಪಿಸುತ್ತಾನೋ ಅಂತಹ ಏಕಾಂತ ಭಕ್ತನ ಭಕ್ತಿಯಿಂದ ಸಮರ್ಪಿಸಲ್ಪಟ್ಟುದನ್ನು ನಾನು ಭುಜಿಸುವೆನು)

ಎಂದು ಶ್ರೀಕೃಷ್ಣನು ತಾನು ಏಕಾಂತ ಭಕ್ತರಲ್ಲಿ ಅತ್ಯಂತ ಮಮತೆಯುಳ್ಳವನೆಂದು ಉಪದೇಶಿಸಿರುವನು. ದಾಸರು ಏಕಾಂತ ಭಕ್ತರಲ್ಲಿ ಅಗ್ರಗಣ್ಯರೆಂಬುದನ್ನೂ ಭಗವಂತನು ಭಕ್ತಪ್ರಿಯನೆಂಬುದನ್ನೂ ಚೆನ್ನಾಗಿ ತಿಳಿಯಬಹುದು. ಅಲ್ಲದೆ ದಾಸರು ಗುರುಭಕ್ತರಲ್ಲಿಯೂ ಧರ್ಮ ಮತ್ತು ಧರ್ಮಸೂಕ್ಷ್ಮಗಳನ್ನು ಪರಿಪಾಲಿಸುವುದರಲ್ಲೂ ಸದಾನಿಷ್ಠರಾಗಿ ಲೋಕಕ್ಕೆ ದಿವ್ಯನೀತಿಗಳನ್ನು ತಿಳಿಸುವುದರಲ್ಲೇ ಆಸಕ್ತರೆಂಬುದನ್ನೂ ತಿಳಿಯಬಹುದು.

## ಪರಶೂ ಶಿಲೆ

ಶ್ರೀನಿವಾಸ ನಾಯಕರು ಸರ್ವಸ್ವದಾನ ಮಾಡಿ ದಾಸರಾದರೆಂದೂ ಈಗ ಹಂಪೆಯಲ್ಲಿರುವರೆಂದೂ ತಿಳಿದು, ದಾಸರ ಹಿರಿಯ ಮಗ ವರದಪ್ಪನಿಗೆ

ಹೆಣ್ಣು ಕೊಟ್ಟ ಬೀಗರು—"ಮನೆಯ ಬಾಗಿಲಲ್ಲಿ ಭಾಗ್ಯ ಲಕ್ಷ್ಮಿಯು ಕುಣಿಯುತ್ತಿರಲು ಹೊಡೆದೋಡಿಸಿ ತಿರುಪೆಯೆತ್ತುವುದೆಂದರೆ ಇದೆಂತಹ ತಿಳಿಗೇಡಿತನ, ಶ್ರೀಮಂತರಾದ ಶ್ರೀನಿವಾಸ ನಾಯಕರು ನಮ್ಮ ಘನತೆಗೆ ಸರಿಯಾದವರು ಎಂದು ತಿಳಿದು ನಾವು ಇಂಥಾ ಲಕ್ಷ್ಮೀ ಪುತ್ರರ ಸಂಬಂಧವನ್ನು ಬೆಳೆಸಿದ್ದರೆ ನಾಯಕರು ಎಂಥಾ ಅವಿವೇಕವನ್ನು ಮಾಡಿಬಿಟ್ಟರು" ಎಂದುಕೊಂಡು, ನಾಯಕರಿಗೆ ನಾಲ್ಕು ಹಿತದ ಮಾತುಗಳನ್ನು ಹೇಳಿ ಇನ್ನಾದರೂ ಸ್ವಲ್ಪ ಯೋಗ್ಯ ರೀತಿಯಿಂದ ಸಂಸಾರ ಮಾಡಿಕೊಂಡು ಇರುವಂತೆ ಹೇಳಿ ಬರಬೇಕೆಂದು ದಾಸರನ್ನು ಹುಡುಕಿಕೊಂಡು ಹಂಪೆಗೆ ಬಂದರು. ಪ್ರಲ್ಹಾದ ಮಹಾರಾಜನಿಗೆ ಯಾವುದೋ ಭೂತ ಹಿಡಿದಿರುವುದೆಂದೂ ಅದನ್ನು ಬಿಡಿಸಬೇಕಾದುದು ತನ್ನ ಕರ್ತವ್ಯವೆಂದೂ ಹಿರಣ್ಯಕಶಿಪುವು ಹರಿನಾಮಸ್ಮರಣೆ ಮಾಡುವವನನ್ನು ಭೂತಹಿಡಿದವನ ಸಾಲಿಗೆ ಸೇರಿಸಿದಂತೆಯೂ, ಕಂಡಕಂಡಲ್ಲಿ ಹರಿಮೂರ್ತಿಯನ್ನು ಕಾಣುತ್ತಾ ಕೈಮುಗಿಯುವ ಜಡಭರತ ಯೋಗಿಯನ್ನು-ಬಂಧುಗಳೂ, ಊರವರೂ, ಹುಚ್ಚರ ಪಂಕ್ತಿಗೆ ಸೇರಿಸಿದಂತೆಯೂ, ಈ ಬೀಗರು ಭಗವಂತನ ಪಾದಭಜನೆಯನ್ನು ಸದಾ ಮಾಡುತ್ತಿರುವ ಮಹಾಭಾಗ್ಯವನ್ನು ಹೊಂದಿ ಭಗವದ್ದರ್ಶನಾನಂದದಿಂದ ಕುಣಿದಾಡುತ್ತಾ ಸದ್ವರ್ತನೆಯಲ್ಲಿ ಕ್ಷಣಕ್ಷಣವನ್ನು ಹರಿ ಸೇವೆಗೆ ಧಾರೆಯೆರೆಯುತ್ತಿರುವ ದಾಸರನ್ನು ನಿರ್ಭಾಗ್ಯರ ಮಧ್ಯೆ ಸೇರಿಸುವ ಯತ್ನ ಮಾಡಿದರು.

ಬೀಗರು ಬರುವಾಗ ದಾಸರು ಮನೆಯಲ್ಲಿರಲಿಲ್ಲ, ಗೋಪಾಳಕ್ಕೆ ಹೋಗಿದ್ದರು. ಬಾಯಿಯವರು ಬೀಗರನ್ನು ಕರೆದು ಕುಳ್ಳಿರಿಸಿದರು. ಬೀಗರು 'ನಾಯಕರೆಲ್ಲಿ?' ಎಂದು ಕೇಳಲು ಬಾಯಿಯವರು ದಾಸರು ಗೋಪಾಳಕ್ಕೆ ಹೋಗಿರುವರೆಂದರು. ಬೀಗರಿಗೆ–ಲಕ್ಷಾಧಿಪತಿಗಳನ್ನು ಎಣಿಕೆಗೆ ತಾರದವರು ಭಿಕ್ಷೆಯನ್ನು ಎತ್ತಲು ಹೊರಟರೆ—ಎಲ್ಲವನ್ನೂ ತಾವೇ ಕಳೆದುಕೊಂಡು ಈಗ ಬೇಡಲು ಹೊರಟರೆ ಇದೆಂತಹ ತಿಳಿಗೇಡಿತನವೆಂದು ದಾಸರ ವಿಷಯದಲ್ಲಿ ಅತ್ಯಂತ ಜುಗುಪ್ಸೆಯುಂಟಾಯ್ತು. ಬಂದ ಬೀಗರಿಗೆ ತಕ್ಕ ಆತಿಥ್ಯವನ್ನು ಮಾಡಬೇಕೆಂಬ ಅಭಿಮಾನವು ಬಾಯಿಯವರಿಗೆ ಬಿಡಲಿಲ್ಲ. ಸರಸ್ವತೀಬಾಯಿಯವರಿಗೆ ಪತಿಯ ವಿಷಯದಲ್ಲಿ ಪತಿಯ ಈಗಿನ ವೃತ್ತಿ

ಯಿಂದಾಗಿ ಕಿಂಚಿತ್ತೂ ಅಗೌರವ ಬುದ್ಧಿ ಯಿರಲಿಲ್ಲವಾದರೂ, ಶ್ರೀಮಂತರಾದ ಬೀಗರು ಮನೆಗೆ ಬಂದಾಗ ತಮ್ಮ ಈಗಿನ ಸ್ಥಿತಿಯನ್ನು ತಿಳಿಸಬಾರದು ಎಂಬ ಬುದ್ಧಿಯು ಸ್ತ್ರೀಸಹಜವಾಗಿ ಬಂತು. ದಾಸರ ವೈರಾಗ್ಯ ಆದರ್ಶ. ಅದು ಬಾಯಿಯವರಿಗೆ ಹೇಗೆ ಬರಬೇಕು. ಅಭಿಮಾನಾದಿಗಳನ್ನು ಬಿಡುವುದು ಅಷ್ಟೊಂದು ಸುಲಭದ ಮಾತಲ್ಲ. 'ಕಥಂ ಅಭಿಮಾನತ್ಯಾಗಃ' ಎಂಬ ಅರ್ಜುನನ ಶಂಕೆಗೆ ಶ್ರೀಕೃಷ್ಣನು ಸಮಾಧಾನವನ್ನು ಹೇಳುತ್ತಾ ಅಭಿಮಾನ ತ್ಯಾಗ ವಿಧಾನವನ್ನು ವಿಸ್ತಾರವಾಗಿ ವಿವರಿಸಬೇಕಾಯ್ತು. ಇಂದ್ರಾವತಾರಿಯಾದ ಅರ್ಜುನನಿಗೇ ಅಭಿಮಾನವನ್ನು ಬಿಡುವುದು ಕಷ್ಟವಾಗಿರಲು ಇನ್ನು ಸರಸ್ವತೀಬಾಯಿಯವರು ಹೇಗೆ ಅಭಿಮಾನವನ್ನು ಸುಲಭವಾಗಿ ತ್ಯಜಿಸಿಯಾರು? ನವಕೋಟಿ ನಾರಾಯಣರೆನಿಸಿ ಶ್ರೀಮಂತಿಕೆಯ ದರ್ಪದಿಂದ ದಯಾದಾಕ್ಷಿಣ್ಯ ಶೂನ್ಯರಾಗಿದ್ದ ನಾಯಕರು ತುಂಬಿದ ಮನೆಯ ಮೇಲೆ ತುಳಸೀದಳವನ್ನಿಟ್ಟು ಸರ್ವಸ್ವ ಸತ್ಪಾತ್ರರಿಗೆ ದಾನಮಾಡಿ ಹರಿದಾಸರಾಗಲು ಕಾರಣರು ಸರಸ್ವತೀಬಾಯಿಯವರೇ ಆದರೂ, ಸರ್ವಸ್ವ ದಾನಮಾಡಿ ನಾಯಕರು ವ್ಯಾಸರಾಯರ ಬಳಿಗೆ ಪತ್ನೀ ಪುತ್ರರೊಂದಿಗೆ ಹೋಗುತ್ತಿರಲು ಕಾಡುದಾರಿಯೊಂದನ್ನು ಹಾದು ಹೊಗುವಾಗ ಬಾಯಿಯವರು 'ಏಕೋ ಭಯವಾಗುತ್ತಿದೆ' ಎಂದರಂತೆ—ನಾಯಕರು 'ಕಳ್ಳರೇನು ನಮ್ಮನ್ನು ಮುಟ್ಟುವಂತಹ ವಸ್ತು ನಮ್ಮಲ್ಲಿಲ್ಲವಲ್ಲ' ಎಂದರು; ಬಾಯಿಯವರು 'ನೀವು ನಿತ್ಯದಲ್ಲೂ ಸಂಧ್ಯಾವಂದನೆಗೆ ಇಟ್ಟುಕೊಳ್ಳುತ್ತಿದ್ದ ಬೆಳ್ಳಿಯ ಪಂಚಪಾತ್ರೆಯೊಂದನ್ನು ತಂದಿರುವೆ' ಎಂದಾಗ ನಾಯಕರು– 'ಎಲ್ಲವನ್ನೂ ದಾನಮಾಡುವಾಗ ಅದೊಂದನ್ನೇಕೆ ಉಳಿಸಿಕೊಂಡೆ, ಅದು ನಮ್ಮಲ್ಲಿರುವುದೇ ನಮಗೆ ಭಯಕ್ಕೆ ಕಾರಣ'ವೆಂದು ಅದನ್ನು ಪತ್ನಿಯಿಂದ ಪಡೆದು ದೂರ ಎಸೆದಿದ್ದರು. ಎಲ್ಲವನ್ನೂ ಕೊಡುವಾಗ ಬಾಯಿಯವರು ತಮ್ಮ ಪತಿಗೆ ತಮ್ಮ ವಿವಾಹಕಾಲದಲ್ಲಿ ತವರು ಮನೆಯವರು ವರ ಪೂಜಾಕಾಲದಲ್ಲಿ ಕೊಟ್ಟ ವಸ್ತುವೆಂದು ಆ ಪಂಚ ಪಾತ್ರೆಯ ಮೇಲಿನ ಅಭಿಮಾನವನ್ನು ಬಿಡದೆ ಅದನ್ನು ತಂದಿದ್ದರು. ಅಂದ ಮೇಲೆ ಅಭಿಮಾನ ತ್ಯಾಗವು ಸುಲಭದ ಮಾತಲ್ಲ- ಈಗಲೂ ಬಾಯಿಯವರು ಅಭಿಮಾನಕ್ಕೆ ವಶರಾಗಿಯೇ ಇನ್ನು ದಾಸರು ಬಂದ ನಂತರ ಎಲ್ಲವನ್ನೂ ಹವಣಿಸಿಕೊಂಡು ಅಡುಗೆ ಮಾಡುವುದೆಂದರೆ ಬಹಳ ಹೊತ್ತಾಗುವುದು. ಬೀಗರಾದರೋ

ಸಕಾಲದಲ್ಲಿ ಭೋಜನಮಾಡುವ ಶ್ರೀಮಂತರು. ದಾಸರ ವಿಷಯದಲ್ಲಿ ಬೀಗರಿಗೆ ತಿರಸ್ಕಾರ ಬುದ್ಧಿಯುಂಟಾಗಬಾರದು. ಗೌರವಕ್ಕೆ ಕುಂದು ಬರ ಬಾರದೆಂದೂ ಬಂದ ಬೀಗರಿಗೂ ಸಂತೋಷವಾಗಬೇಕೆಂದೂ ಯೋಚಿಸಿ ಆ ಊರಲ್ಲಿರುತ್ತಿದ್ದ ವೈಲಾರಪ್ಪನೆಂಬ ಬ್ರಾಹ್ಮಣನಲ್ಲಿ ಒಂದು ಪರಶು ಶಿಲೆ ಇರುವುದೆಂದೂ ಆ ಶಿಲೆಯನ್ನು ಪೂಜಿಸುವ ವಿಧಾನವನ್ನರಿತು ಪೂಜಿಸಿದರೆ ಒಂದು ದಿನಕ್ಕೆ ಬೇಕಾದಷ್ಟು ಬಂಗಾರವನ್ನು ಕಾರುವುದು ಆ ಶಿಲೆಯ ಲಕ್ಷಣವೆಂದೂ ಕರ್ಣಾಕರ್ಣಿಕೆಯಾಗಿ ಕೇಳಿದ್ದ ಬಾಯಿಯವರು ಆ ಬ್ರಾಹ್ಮಣನ ಪತ್ನಿಯಿಂದ ಒಂದು ಒಪ್ಪೊತ್ತಿಗೆ ಎರವಾಗಿ ಆ ಶಿಲೆಯನ್ನು ಕೇಳಿ ತಂದು ತಮ್ಮ ಕಾರ್ಯವನ್ನು ನಿರ್ವಹಿಸುವುದೆಂದುಕೊಂಡು ವೈಲಾರಪ್ಪನ ಮನೆಗೆ ಬಂದು ಆತನ ಪತ್ನಿಗೆ ತಾವು ಬಂದ ಕಾರಣವನ್ನು ತಿಳಿಸಲು ಆಕೆಯು 'ಬಾಯಿಯವರೇ ಶಿಲೆಯೇನೋ ಇದೆ, ಇಲ್ಲವೆನ್ನುವುದಿಲ್ಲ. ಆದರೆ ನಮ್ಮ ಯಜಮಾನರು ಈ ಶಿಲೆಯನ್ನು ತಮ್ಮ ಪಂಚಪ್ರಾಣವೆಂದು ತಿಳಿದಿರುವರು, ನಿಮ್ಮ ಕೆಲಸವಾದ ಮರುಕ್ಷಣದಲ್ಲೇ ಹಿಂದಕ್ಕೆ ತಂದೊಪ್ಪಿಸಿಬಿಡಿ, ಇಲ್ಲವಾದರೆ ಅನರ್ಥವಾಗುತ್ತೆ' ಎಂದವಳೇ ಪರಶು ಶಿಲೆಯನ್ನು ಕೊಟ್ಟು ಅದನ್ನು ಅರ್ಚಿಸುವ ವಿಧಾನವನ್ನು ತಿಳಿಸಿದಳು. ಆ ವಿಧಾನವು ವಾಮಾಚಾರ ವಿಧಾನವು. ಆದರೂ ಬಾಯಿಯವರು ಶಿಲೆಯನ್ನು ಮನೆಗೆ ತಂದು ಆಕೆ ಹೇಳಿದ ವಿಧಾನದಿಂದಲೇ ಪೂಜಿಸಿ ಶಿಲೆಯು ಕಾರಿದ ಬಂಗಾರವನ್ನು ವಿಕ್ರಯಿಸಿ ಸಕಲ ಸಾಹಿತ್ಯವನ್ನೂ ತರಿಸಿ ಅಡುಗೆಗಾರಂಭಿಸಿದಳು.

ಇತ್ತ ಗೋಪಾಳಕ್ಕೆ ಹೋಗಿದ್ದ ದಾಸರಿಗೆ ಒಂದು ವಿಧವ ಕಳವಳಉಂಟಾಗಿ 'ಇದೇನು ಈ ದಿನ ಏಕೋ ಮನಃಶಾಂತತೆಯೇ ಇಲ್ಲವಾಗಿದೆ ಎಂದು ತಮ್ಮಷ್ಟಕ್ಕೆ ತಾವು ಅಂದುಕೊಂಡು ಅಷ್ಟಕ್ಕೆ ಆ ದಿನದ ಗೋಪಾಳವನ್ನು ಮುಗಿಸಿ ಮನೆಗೆ ಬಂದರು. ದೂರದಲ್ಲಿ ಬರುತ್ತಿದ್ದ ದಾಸರನ್ನು ಕಂಡು ಬೀಗರು 'ಅಯ್ಯೋ! ಇವರ ಪ್ರಾರಬ್ಧವೇ!' ಅಂದುಕೊಂಡರು. ದಾಸರು ಬಂದು ಬೀಗರನ್ನು ಕಂಡಮೇಲೆ ಸಂಪ್ರದಾಯದಂತೆ ಕುಶಲಪ್ರಶ್ನೆಗಳಾಯ್ತು. ಬೀಗರು ನಾಯಕರ ಈ ದೆಶೆಯನ್ನು ನೋಡಿ ಸಹಿಸಲಾರದೆ –'ಕೋಟ್ಯಾಧೀಶ್ವರರಾಗಿ ರತ್ನಪಡಿ ವ್ಯಾಪಾರವನ್ನು ಮಾಡು

ತ್ತಿದ್ದುದನ್ನು ಬಿಟ್ಟು ಇದೇನು ನಿಮ್ಮ ವ್ಯಾಪಾರ?' ಎಂದ ಕೇಳಿ ಬಿಟ್ಟರು. ಆಗ ದಾಸರು—ಈಗ ಇದೇ ನಮ್ಮ ವ್ಯಾಪಾರ. ಇದು ಯಾವಕಾಲಕ್ಕೂ ನಷ್ಟಬೀಳದ ವ್ಯಾಪಾರ—

**ಪೂರ್ವಿ ರಾಗ ಅಟ ತಾಳ**

ವ್ಯಾಪಾರ ನಮಗಾಯಿತು ‖ ಪ ‖
ಶ್ರೀಪತಿ ಪಾದಾರವಿಂದ ಸೇವೆಯೆಂಬ ‖ ಅ ‖ ಪ ‖
ಹರಿ ಕರುಣವೆ ಅಂಗಿ ಗುರುಕೃಪೆ ಮುಂಡಾಸು
ಹರಿದಾಸರ ದಿವ್ಯ ದಯವೆಂಬೊ ವಲ್ಲಿ ‖
ಪರಮ ಪಾಪಿ ಕಲಿ ಎಂಬ ಪಾಪೋಸು ಮೆಟ್ಟಿ
ದುರುಳರಾಗಿಪ್ಪರ ಎದೆ ಮೇಲೆ ನಡೆವಂಥ ‖ ೧ ‖

ಬಿಳಿಯ ಕಾಗದ ಹೃದಯ ಬಾಯಿ ಕಲಮುದಾನಿ
ನಾಲಗೆ ಎಂಬೋದು ಲೇಖಣಿಯು ‖
ಶ್ರೀಲೋಲನ ಕಥೆ ದಿವ್ಯ ಮಂಗಳ ನಾಮ
ಶೀಲ ಮನದಿ ಬರೆದ್ದರಿಗೆ ಅರ್ಪಿಸುವಂಥ ‖ ೨ ‖

ಮುಂದಣ ಕಾಲದ ಸಂಸಾರದ ಬಾಧೆ
ಎಂದೆಂದಿಗು ಅದರ ಭಯ ಬಿಟ್ಟಿತು ‖
ಹಿಂದಣ ಸಂಚಿತ ಸಾಲ ಭಾರಕ್ಕೆಲ್ಲ
ಸಂದಾಯವನು ಮಾಡಿ ಕಸಬಿ ಹರಿಸಿ ಬಿಟ್ಟ ‖ ೩ ‖

ನುಡಿನುಡಿಗಾನಂದ ಬಾಷ್ಪರೋಮಾಂಚನ
ಮುಡುಪಿನೊಳಗೆ ಇಟ್ಟ ಕೈಜೀತವು ‖
ಕಡೆಯ ಸಂಬಳಕೆಲ್ಲ ಮುಕುತಿ ಸಾಧನವನ್ನು
ಕೊಡುವಂತೆ ತಿರುಗಿದ ಚೀಟಿ ಬರೆಸಿಕೊಟ್ಟ ‖ ೪ ‖
ಕಂಡ ಕಂಡವರಲ್ಲಿ ಕಾರ್ಪಣ್ಯವ ತೋರಿ
ಮಂಡೆ ಅಡ್ಡಾಗಿ ನಾ ಬಳಲಲಿಲ್ಲ ‖
ಪುಂಡರೀಕಾಕ್ಷ ಶ್ರೀ ಪುರಂದರ ವಿಠಲನು
ದಂಡಿಗೆ ಬೆತ್ತವ ಕೊಟ್ಟು ಸೇವೆಯೊಳಿಟ್ಟ ‖ ೫ ‖

ಎಂಬುದಾಗಿ ಹಾಡಲು ಬೀಗರು ಮಾತೆತ್ತಿ ದಾಕ್ಷಣ ದಾಸರು ಹಾಡಿಗೇ ಆರಂಭಿಸಿದುದನ್ನು ಕಂಡು ಅಯ್ಯೋ ನಾಯಕರಿಗೆ ಬುದ್ಧಿಯೇ ಸ್ವಾಧೀನ ವಿಲ್ಲವೋ ಏನೋ ಎಂದುಕೊಂಡು ಹಣೆ ಮುಟ್ಟಿಕೊಂಡರು.

ದಾಸರನ್ನು ಕುರಿತು—ಸರಸ್ವತೀ ಬಾಯಿಯವರು 'ಅಡುಗೆಯಾಗಿದೆ ಸ್ನಾನಕ್ಕೇಳಿ' ಎನ್ನಲು ದಾಸರೂ ಆಗಿನ್ನೂ ತಾವು ಬಂದುದಷ್ಟೇ ಜೋಳಿಗೆಯಿನ್ನೂ ಹೆಗಲಲ್ಲೇ ಇತ್ತು. ಹಿಂದಿನ ದಿನದ ಯಾವ ಸಾಹಿತ್ಯ ವನ್ನೂ ದಾಸರು ಉಳಿಯಗೊಡುತ್ತಿರಲಿಲ್ಲ. ಬಂದಷ್ಟರಿಂದ ಅಂದಂದು ವಿಪ್ರ ರಿಗೆ ದಾನಮಾಡಿ 'ಇಂದು ನಾಳೆಗೆಯೆಂಬ ಯೋಚನೆಯ ಬಿಡಬೇಕೆ'ಂಬ ಹರಿದಾಸ ಲಕ್ಷಣವನ್ನು ಸಾರಿ ಅದರಂತೆ ನಡೆಯುತ್ತಿದ್ದವರು ಪತ್ನಿಯು ಇಷ್ಟು ಬೇಗನೇ ಯಾವ ಪದಾರ್ಥವೂ ಮನೆಯಲ್ಲಿಲ್ಲದೆ ಅಡುಗೆಯನ್ನು ಹೇಗೆ ಮಾಡಿರಬಹುದೆಂಬ ಆಶ್ಚರ್ಯದಿಂದ-'ಅಡುಗೆಗೆ ಸಾಹಿತ್ಯವೆಲ್ಲಿತ್ತು?' ಎಂದು ಕೇಳಲು ಬಾಯಿಯವರು ಎಲ್ಲ ವಿಷಯವನ್ನೂ ತಿಳಿಸಿದರು. ವಾಮ ಮಾರ್ಗದಿಂದ ಸಂಗ್ರಹಿಸಿದ ದುಷ್ಟ ಪದಾರ್ಥಗಳನ್ನು ಮನೆಯಲ್ಲಿ ಪತ್ನಿಯು ಬೇಯಿಸುತ್ತಿದ್ದುದೇ ಗೋಪಾಳಕ್ಕೆ ಹೋಗಿದ್ದ ತಮಗೆ ಕಳವಳ ಉಂಟಾಗಲು ಕಾರಣವೆಂದು ತಿಳಿದು ಮಾಡಿದಡುಗೆಯನ್ನೆಲ್ಲಾ ಚೆಲ್ಲಿಸಿ ಪಾತ್ರೆತೊಳೆದು ಒಲೆ ಸಾರಿಸಿ ಪುನಃ ತಾವು ಅಂದುತಂದ ಪದಾರ್ಥದಿಂದ ಅಡುಗೆಮಾಡುವಂತೆ ಪತ್ನಿಗೆ ತಿಳಿಸಿ ಆ ಶಿಲೆಯನ್ನು ಪತ್ನಿಯಿಂದ ಪಡೆದು ತಂದು ತುಂಗಭದ್ರಾ ನದಿಯ ಚಕ್ರತೀರ್ಥವೆಂಬ ಮಡುವಿನಲ್ಲಿ ಎಸೆದು ಬಂದು ಬಿಟ್ಟರು. ಸಾಧ್ವೀಮಣಿಯಾದ ಸರಸ್ವತೀ ಬಾಯಿಯವರು ಪತಿ ಯಾಜ್ಞೆಯಂತೆ ಪುನಃ ಅಡುಗೆ ಮಾಡಿದರು. ದಾಸರು ಸ್ನಾನಮಾಡಿ ದೇವ ಪೂಜಾ ಮುಗಿಸಿದರು. ಅಷ್ಟರಲ್ಲೇ ಇತ್ತ ಮನೆಗೆ ಬಂದ ಮೈಲಾರಪ್ಪನು ಶಿಲೆಯನ್ನು ಕಾಣದೆಹೆಂಡತಿಯ ಮೇಲೆ ರೇಗಾಡಿ ದಾಸರ ಪತ್ನಿಯು ಕೊಂಡು ಹೋಗಿರುವುದನ್ನು ತಿಳಿದು ಓಡೋಡುತ್ತಾ ದಾಸರ ಮನೆಗೆ ಬಂದು "ದಾಸರೇ! ಈ ಮನೆ ಹಾಳುತನ ವಿದ್ಯೆಯನ್ನು ಎಲ್ಲಿ ಕಲಿತಿರಿ! ನಾನು ಮನೆ ಯಲ್ಲಿ ಇಲ್ಲದ ಸಮಯದಲ್ಲಿ ನಿಮ್ಮ ಹೆಂಗಸರನ್ನು ಕಳುಹಿಸಿ ಪರಶು ಶಿಲೆ ಯನ್ನು ತರಿಸಿರುವಿರಿ. ಅದನ್ನು ಬೇಗನೆ ಹಿಂದಕ್ಕೆ ಕೊಟ್ಟುಬಿಡಿ ಇಲ್ಲವಾ

ದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ...."ಎಂದು ಹಾದಿರಂಪ ಬೀದಿರಂಪ ಮಾಡಿದನು. ಆಗ ದಾಸರು–'ಅಪ್ಪಾ! ವಾಮಮಾರ್ಗದಿಂದ ಸಂಗ್ರಹಿಸುವ ದ್ರವ್ಯವು ಬಹುಪಾಪಪ್ರದವಾದುದು. ಇದರಿಂದ ಕ್ಷೇಮವಿಲ್ಲ' ಎಂದು ಹೇಳಲು ಮೈಲಾರಪ್ಪನು–'ನನಗೆ ನಿಮ್ಮ ತತ್ವೋಪದೇಶ ಬೇಕಾಗಿಲ್ಲ, ಮೊದಲು ನನ್ನ ಪರಶು ಶಿಲೆಯನ್ನು ಕೊಟ್ಟುಬಿಡಿ ಆ ಮೇಲೆ ಬೇರೆಮಾತು' ಎನ್ನಲು ದಾಸರು— 'ಮೈಲಾರಪ್ಪ! ಆ ಶಿಲೆಯು ಸರ್ವಥಾ ಇರಬಾರದೆಂದು ಚಕ್ರತೀರ್ಥದಲ್ಲಿ ಎಸೆದಾಗಿದೆ' ಎಂದಾಕ್ಷಣ ಮೈಲಾರಪ್ಪನು ಎದೆಯನ್ನು ಬಡಿದುಕೊಳ್ಳುತ್ತಾ 'ಅಯ್ಯೋ! ಹಾಗಾದರೆ ನಾನೂ ಮಡುವಿನಲ್ಲಿ ಧುಮುಕಿ ನಿಮ್ಮ ಹೆಸರಿನಲ್ಲಿಯೇ ಪ್ರಾಣಬಿಡುವೆನು' ಎಂದು ಥಕಥಕ ಭರತನಾಟ್ಯಕ್ಕೇ ಆರಂಭಿಸಿಬಿಟ್ಟನು. ಬೀಗರು ಇದೆಲ್ಲವನ್ನೂ ನೋಡುತ್ತಿದ್ದವರು ನಾಯಕರ ರೀತಿ ನೀತಿಗಳೊಂದೂ ಚೆನ್ನಾಗಿಲ್ಲವೆಂದುಕೊಂಡು 'ದಾಸರೇ! ನಿಮ್ಮ ಸ್ವಭಾವಗಳೊಂದೂ ಚೆನ್ನಾಗಿಲ್ಲ. ಬಾಯಿಯವರು ಬಂದವರೆಮುರಿಗೆ ನಿಮ್ಮ ಗೌರವವನ್ನು ಕಾಪಾಡಬೇಕೆಂದು ಎಷ್ಟೋ ದಾಕ್ಷಿಣ್ಯ ವ್ಯಯಮಾಡಿ ಎಲ್ಲವನ್ನು ಸಿದ್ಧಪಡಿಸಿಟ್ಟಿದ್ದರೆ ಮಾಡಿದಡಿಗೆಯನ್ನೂ ನದಿಗೆ ಹಾಕಿಸಿದಿರಿ. ಅದಂತೂ ಹೋಗಲಿ ಎಂದರೆ ಕಂಡವರ ಒಡವೆಯನ್ನು ಮಡುವಿಗೆಸೆದಿರಿ ಇವೆಲ್ಲಾ ಚೆನ್ನಾಗಿಲ್ಲ'ಎಂದರು. ದಾಸರು–'ಆದುಷ್ಟದ್ರವ್ಯದಿಂದಸಂಗ್ರಹಿಸಿದ ಪದಾರ್ಥಗಳಿಂದನಮ್ಮಬಿಡಾರದಲ್ಲಿ ಪಾಕಮಾಡುತ್ತಿದ್ದ ಮಾತ್ರದಿಂದಲೇ ಮನಃಶ್ಶಾಂತಿಯಿಲ್ಲದೆ ಭಜನೆಯಲ್ಲಿಯೂ ನೆಮ್ಮದಿಯಿಲ್ಲದಂತಾಯಿತು, ಇನ್ನು ಆ ಪದಾರ್ಥಗಳು ಉದರಪ್ರವೇಶವನ್ನು ಮಾಡಿದ್ದರೆ ಮನಸ್ಸು ಎಷ್ಟೊಂದು ಕಲುಷಿತವಾಗುತ್ತಿತ್ತೋ ಏನೋ. ಆದುದರಿಂದಲೇ ಅಡುಗೆಯನ್ನು ನದಿಗೆ ಹಾಕಿಸಿ ಶಿಲೆಯನ್ನು ಮಡುವಿಗೆಸೆದುದು. ನಮ್ಮ ಶುದ್ಧ ವೃತ್ತಿಯಿಂದ ಶ್ರೀಹರಿಯು ಕೊಟ್ಟ ಪದಾರ್ಥಗಳೇ ಸಾಕು;' ಎಂದು, ಮೈಲಾರಪ್ಪನನ್ನು ಕುರಿತು 'ಮೈಲಾರಪ್ಪ! ನಿನಗೆ ಪರಶು ಶಿಲೆಯು ಬೇಕೇ ಬೇಕೇ?' ಎನ್ನಲು ಮೈಲಾರಪ್ಪನು–'ಅದಕ್ಕಿಂತಲೂ ಮೈಲಾರಪ್ಪ ನೀನು ಬದುಕಲೇ ಬೇಕೇ? ಎಂದು ಕೇಳಿಬಿಡಿ' ಎಂದನು. ದಾಸರು ಸಮೀಪದಲ್ಲಿ ನಿಂತಿದ್ದ ಮಧ್ವಪತಿಯನ್ನು ಕರೆದು 'ಮಧ್ವಪತಿ, ಆ ಪರಶು ಶಿಲೆಯನ್ನು ಹುಡುಕಿತೆಗೆಯಪ್ಪ,' ಎಂದು ಮಧ್ವಪತಿಯನ್ನು ಎತ್ತಿತಂದು ಮಡುವಿಗೆ ದೂಡಲು ಅಲ್ಲಿದ್ದ

ವರೆಲ್ಲರೂ ಹೌಹಾರಿದರು; ಬೀಗರಂತೂ 'ದಾಸರಿಗೆ ಹುಚ್ಚೇಹಿಡಿದಿದೆ ಹುಡುಗನನ್ನು ಕೊಂದರು' ಎಂದರು. ಆದರೆ ಚಕ್ರತೀರ್ಥದ ದಡದಲ್ಲೇ ಯಂತ್ರೋದ್ಧಾರಕನ ಗುಡಿಯಮುಂದೆ ನಿಂತಿದ್ದ ಶ್ರೀ ವ್ಯಾಸರಾಯ ಸ್ವಾಮಿಗಳು ಮಾತ್ರ ಹಸನ್ಮುಖಿಗಳಾಗಿ ಕೈಚಪ್ಪಾಳೆಯನ್ನು ತಟ್ಟಿದರು; ಆಗ ನೋಡಿದವರನೇಕರು 'ಸರಿಹೋಯ್ತು ಈ ಸ್ವಾಮಿಗಳಿಗೂ ಹುಚ್ಚೇ ಹಿಡಿದಂತಿದೆ' ಎನ್ನುವಷ್ಟರಲ್ಲೇ ಬಾಲಕನು ಒಂದು ಬೊಗಸೆಯ ತುಂಬಾ ಪರಶು ಶಿಲೆಗಳನ್ನು ಹಿಡಿದುಕೊಂಡು ಸುರಕ್ಷಿತವಾಗಿ ತಂದೆಯ ಬಳಿಯಲ್ಲಿ ಬಂದುನಿಂತನು. ಆಗ ದಾಸರು ಮೈಲಾರಪ್ಪನನ್ನು ಬಳಿಗೆ ಕರೆದು 'ಇದೋ ನಿನ್ನ ಶಿಲೆಯಾವುದು ನೀನು ಗುರುತಿಸಿ ತೆಗೆದುಕೊ' ಎನ್ನಲು ಈ ಅದ್ಭುತ ವಿಚಾರವನ್ನು ಕಂಡವರೆಲ್ಲರೂ ಬೆರಗಾದರು. ಮೈಲಾರಪ್ಪನಿಗಂತೂ ಏನು ಹೇಳಬೇಕೋ ಏನು ಮಾಡಬೇಕೋ ಎಂಬುದು ಬುದ್ಧಿಗೆ ತೋಚದಿರಲು ಕ್ಷಣಕಾಲ ಸುಮ್ಮನಿದ್ದು ಆ ಮೇಲೆ ಚೈತನ್ಯವನ್ನು ತಂದುಕೊಂಡು— 'ದಾಸರೇ ನಾನು ಮಹಾಪಾಪಿ; ನನ್ನ ಅಪರಾಧವನ್ನು ಕ್ಷಮಿಸಬೇಕು ನನ್ನನ್ನು ಕೈ ಬಿಡಬಾರದು' ಎಂದು ದಾಸರ ಪಾದಗಳ ಮೇಲೆ ಬಿದ್ದನು. ದಾಸರು ಮೈಲಾರಪ್ಪನನ್ನು ಕೈಹಿಡಿದೆತ್ತಿ ತಲೆಯ ಮೇಲೆ ಕೈಯ್ಯಿಟ್ಟು ಅನುಗ್ರಹಿಸಿದರು. ತನಗಿನ್ನು ಆ ಶಿಲೆಯ ಸಂಪರ್ಕವೇ ಬೇಡ ಎಂದನು. ಮೈಲಾರಪ್ಪನ ಈ ಮಾತುಗಳನ್ನು ಕೇಳಿ ದಾಸರು ಆತನ ಮನಸ್ಸು ಹಣ್ಣಾಗಿರುವುದನ್ನು ತಿಳಿದು ಸಂತೋಷಪಟ್ಟರು. ಆ ಶಿಲೆಗಳನ್ನೆಲ್ಲಾ ಮಧ್ವಪತಿಯ ಕೈಯಿಂದಲೇ ದಾಸರು ಮಡುವಿಗೆ ಹಾಕಿಸಿದರು.

ಬೀಗರೂ ದಾಸರು ಮಹಾ ಮಹಿಮಾನ್ವಿತರೆಂಬುದನ್ನು ತಿಳಿದು ದಾಸರಲ್ಲಿ ಕ್ಷಮಾಯಾಚನೆಯನ್ನು ಮಾಡಿದರು.

ದಾಸರು ಮೈಲಾರಪ್ಪ ದಂಪತಿಗಳನ್ನೂ ಬೀಗರನ್ನೂ, ಪತ್ನೀ ಪುತ್ರರನ್ನೂ ಕೂಡಿ ಭಗವತ್ಪ್ರಸಾದವನ್ನು ಭೋಜನ ಮಾಡಿದರು.

ಮೈಲಾರಪ್ಪನೂ ದಾಸರ ಶಿಷ್ಯನಾದನು. ದಾಸರ ಕೃಪೆಗೆಪಾತ್ರನಾದ ಮೇಲೆ ಮೈಲಾರಪ್ಪನಿಗೆ ಆ ಹಾಳುಕಲ್ಲಿನಿಂದ ಆಗಬೇಕಾದುದೇನು?

# ಸ್ತ್ರೀ ನೀತಿಯು

'ಯತ್ರ ನಾರ್ಯಸ್ತು ಪೂಜ್ಯನ್ತೇ ರಮನ್ತೇ ತತ್ರ ದೇವತಾಃ' ||

|| ಮನುಸ್ಮೃತಿಃ ||

**ತಾ||** ಎಲ್ಲಿ ನಾರಿಯರು ಪೂಜಿತೆಯರಾಗುವರೋ ಅಲ್ಲಿ ಸಕಲ ದೇವತೆಗಳೂ(ಸನ್ನಿಹಿತರಾಗಿದ್ದುಕೊಂಡು) ರಮಿಸುತ್ತಾರೆ.

ಯಾವ ಮನೆಯಲ್ಲಿ ಸ್ತ್ರೀಯರನ್ನು ಗೌರವದಿಂದ ಆದರದಿಂದ ಕಾಣುತ್ತಾರೋ ಆ ಮನೆಯು ಪರಮಾತ್ಮನ ಪ್ರೀತಿಪಾತ್ರರಾದ ದೇವತೆಗಳಿಗಾವಾಸಸ್ಥಾನವೆನಿಸುವುದು. ಆ ಮನೆಗೆ ಮಂಗಳವಾಗುವುದು, ಎಂಬುದು ಪವಿತ್ರವಾದ ನಮ್ಮ ಧರ್ಮದಲ್ಲಿ ಸಾರಲ್ಪಟ್ಟ ವಿಷಯವಾಗಿದೆ. 'ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯದೇವೋ ಭವ' ಎಂಬ ವೇದವಾಕ್ಯವನ್ನು ಕಂಡರೆ ಅಲ್ಲೂ ಸ್ತ್ರೀಯರಿಗೆ ಪ್ರಥಮ ಸ್ಥಾನ. ಸನ್ಯಾಸಿಯಾದವನಿಗೆ ತಂದೆಯು ವಂದನ ಮಾಡಬೇಕು. ಆದರೆ ತಾಯಿಯು ವಂದನೀಯಳು. ತಂದೆಯ ಮೃತ ದೇಹವನ್ನು ರಾಜನಾದವನು ನೋಡದಿದ್ದರೆ ಒಳಿತು. ಆದರೆ ತಾಯಿಯ ಮೃತ ಶರೀರಕ್ಕೂ ರಾಜನಾದವನು ಪ್ರದಕ್ಷಿಣೆ ನಮಸ್ಕಾರ ಮಾಡಬೇಕು. ತಂದೆಯಾದವನು ಗಂಡು ಮಗನನ್ನು ಮಾತ್ರ ಶಿಕ್ಷಿಸಬಹುದು. ಆದರೆ ಹೆಣ್ಣು ಮಗಳನ್ನು ಶಿಕ್ಷಿಸಲು ತಂದೆ ತಾಯಿಗಳಿಗೆ ಅಧಿಕಾರವಿಲ್ಲ. **'ಹೆಣ್ಣು ಮುನಿದಾ ಮನೆಯು ಹೆಗ್ಗಂಬ ಮುರಿದಪುದು'** ಅಲ್ಲದೆ ಪುರಾಣಕಾರರೂ ಕೂಡಾ ಅಹಲ್ಯಾ, ದ್ರೌಪದಿ, ತಾರೆ, ತಾರೆ,†

---

† "ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರಿ ತಥಾ। ಪಂಚಕನ್ಯಾಸ್ಮರೇನ್ನಿತ್ಯಂ ಮಹಾಪಾತಕ ನಾಶನಂ" ಎಂಬುದೊಂದು ಪಾಠ. ಅಹಲ್ಯಾ, ದ್ರೌಪದೀ ತಾರಾ, ತಾರಾ ಮಂಡೋದರಿ ತಥಾ......" ಎಂಬುದೊಂದು ಪಾಠ. ಎರಡನೆಯದೇ ಸೂಕ್ತವೆಂಬುದಕ್ಕೆ ಕೆಲವು ಕಾರಣಗಳಿವೆ. ಎರಡನೆಯ ಪಾಠದಲ್ಲಿ ಇಬ್ಬರು ತಾರೆಯರನ್ನು ಹೇಳಿಯದೆ. ಒಬ್ಬಳು ಬೃಹಸ್ಪತ್ಯಾಚಾರ್ಯರ ಪತ್ನಿ. ಇನ್ನೊಬ್ಬಳು ವಾಲಿಯ ಪತ್ನಿ ಎಂದು ತಿಳಿಯಬೇಕು. ಸರ್ವ ಮಂಗಳೆಯಾದ ಲಕ್ಷ್ಮೀದೇವಿಯೇ, ಸೀತಾದೇವಿಯಾದುದರಿಂದ ಇತರ ಸ್ತ್ರೀಯರೊಂದಿಗೆ ಆ ದೇವಿಯನ್ನು ಹೋಲಿಸದಿರುವುದೇ ಉತ್ತಮವಾದ ಪಾಠವೆಂದು ಬಲ್ಲವರ ಅಭಿಪ್ರಾಯ.

ಮಂಡೋದರಿಯೇ ಮೊದಲಾದವರು ಪುರುಷರಿಂದಲೂ ಪ್ರಾತಃ ಸ್ಮರಣೀಯರಾಗಿರುವರು ಅಷ್ಟೇ ಅಲ್ಲ. ತುಳಸೀ ಪೂಜೆಯೆಂದು ಗಂಡಸರೂ ತುಳಸೀದೇವಿಯನ್ನು ಪೂಜಿಸುತ್ತಾರೆ. **ಹಿಂದೂಗಳು ಲಕ್ಷ್ಮೀ, ಸರಸ್ವತೀ, ಪಾರ್ವತೀ ದೇವಿಯರನ್ನಂತೂ ವಿಶೇಷತಃ ಆರಾಧಿಸುವರು. ಹಿಂದೂ ಸಂಪ್ರದಾಯದಲ್ಲಿ ಸ್ತ್ರೀಯರಿಗೆ ವಿಶಿಷ್ಟವಾದ ಸ್ಥಾನವು ವೇದ ಕಾಲದಿಂದಲೂ ಕಾದಿಡಲ್ಪಟ್ಟಿದೆ.** ನವರಾತ್ರಿಯಲ್ಲಿ ದೇವೀ ಮಹಾತ್ಮ್ಯವನ್ನು ಪಾರಾಯಣ ಮಾಡುವವರೂ ಪುರುಷರೇ. ಲಕ್ಷ್ಮೀ ಹೃದಯವನ್ನೂ ಪುರುಷರೇ ಪಾರಾಯಣ ಮಾಡುತ್ತಾರೆ.

ಇವರಲ್ಲದೆ ಅರುಂಧತೀ, ಸಾವಿತ್ರೀ, ಅನಸೂಯಾ, ಸುಕನ್ಯಾ, ಸುಪ್ರಭಾ, ಲೋಪಾಮುದ್ರಾ, ದಮಯಂತಿಯೇ ಮೊದಲಾದವರು ಜಗತ್ಪ್ರಸಿದ್ಧೆಯರಾಗಿ ಪ್ರಖ್ಯಾತರಾಗಿರುವರು.

ಗೃಹವೆಂದು ಕರೆಸಿಕೊಳ್ಳಲು ಗೃಹಿಣಿಯು ಬೇಕೇ ಬೇಕು. ಗೃಹಸ್ಥನು ಯಾವ ಸತ್ಕಾರ್ಯವನ್ನು ಮಾಡುವುದಾದರೂ ಪತ್ನಿಯನ್ನು ಕೂಡಿಯೇ ಮಾಡಬೇಕು. ಮಕ್ಕಳನ್ನು ಪಡೆದವರಲ್ಲೂ ಚೊಚ್ಚಲು ಹೆಣ್ಣನ್ನು ಪಡೆದವನಿಗೇ ಪ್ರಥಮ ಗೌರವ. ಕನ್ಯಾದಾನವನ್ನು ಮಾಡಿದ ಗೃಹಸ್ಥನೇ ಧನ್ಯನೆನಿಸುವನು. "ಊರಿಗೆ ಅರಸನಾದರೂ ತಾಯಿಗೆ ಮಗ" ಗಾದೆ. ಹೀಗಾಗಿ ಜನ್ಮದಾತೆಗೆ ಧರೆಯನ್ನಾಳುವವನೂ ದಾಸನೇ. ತಾಯಿಯ ಋಣವು ಏಳು ಜನ್ಮದಲ್ಲೂ ತೀರದು; ಪತಿವ್ರತೆಯರು ಪ್ರಥಮಪೂಜೆಗೊಪ್ಪುತಿದ್ದಾರೆ.

**ಯಾವ ರೀತಿಯಿಂದ ನೋಡಿದರೂ ನಮ್ಮ ಧರ್ಮದಲ್ಲಿ ನಾರಿಯರ ಯೋಗ್ಯತೆಗೆ ನ್ಯೂನತೆಯಿಲ್ಲವಷ್ಟೇ ಅಲ್ಲ, ಅವರಿಗಾಗಿ ಸದಾ ಪೂಜನೀಯ ಸ್ಥಾನವು ಮೀಸಲಾಗಿಯೇ ಇದೆ.**

**ಪತಿವ್ರತೆಯರನ್ನು ಕೆಣಕಿದ ಯಾವ ಪುರುಷನೂ ಉತ್ತಮರಿಂದಿರಲಿ ನೀಚರಿಂದಲೂ ಮಾನಿತನಾಗಿಲ್ಲ.**

'ಇಂತಹ ಪರಮಪವಿತ್ರವಾದ ನಮ್ಮ ಧರ್ಮದವಿಷಯ ಸ್ತ್ರೀಯರಿಗೆ ಸ್ಥಾನವಿಲ್ಲ, ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲ. ಸ್ತ್ರೀಯರನ್ನು ತುಚ್ಛೀಕರಿಸಿದ್ದಾರೆ

ಅವರನ್ನು ಮನೆಯ ಮೂಳೆಯರನ್ನಾಗಿ ಮಾಡಿದ್ದಾರೆ' ಎಂಬುದಾಗಿ ಕೆಲವರು ನಮ್ಮವರೇ ಅಪಪ್ರಚಾರ ಮಾಡುತ್ತಿದ್ದಾರೆ. ಇವನ್ನು ಕೇಳಿ ನಮ್ಮ ಮಹಿಳೆಯರೂ ಪುರುಷರೂ ನಮ್ಮ ಧರ್ಮವನ್ನು ನೋಡದಂಥವರು ಈ ಮಾತಿಗೆ ಮರುಳಾಗುತ್ತಲೂ ಇದ್ದಾರೆ. ಈ ವಿಷಯದಲ್ಲಿ ಹಿಂದೂ ಧರ್ಮತತ್ವವೇತ್ತರು ಎಷ್ಟು ತಮ್ಮ ಉತ್ತಮ ಧರ್ಮವನ್ನು ಪ್ರಚುರ ಪಡಿಸಿದರೂ ನಮ್ಮ ಧರ್ಮದ ಮೇಲಿನ ಅಪಪ್ರಚಾರದಿಂದುಂಟಾದ ಹಾನಿಯನ್ನು ತುಂಬಲು ಸಾಲದಾಗಿದೆ.

ಪ್ರಕೃತ ಹಿಂದೂಧರ್ಮದಲ್ಲಿ ಸ್ತ್ರೀಯರನ್ನು ಅಲ್ಲಗಳೆದ ವಾಕ್ಯಗಳೂ ಇವೆ. ಆದರೆ ಎಂತಹ ಸ್ತ್ರೀಯರನ್ನು–ಅರ್ಜುನನು ಶ್ರೀಕೃಷ್ಣನಲ್ಲಿ

'ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣ ಸಂಕರಃ ||

ಗೀತಾ || ೧–೪೧ ||

'ಹೆ! ವೃಷ್ಣಿ ಕುಲೋದ್ಭೂತನಾದ ಶ್ರೀಕೃಷ್ಣನೇ! ಸ್ತ್ರೀಯರು ದೂಷಿತೆಯರಾದೊಡನೆ ವರ್ಣಸಾಂಕರ್ಯ ಉತ್ಪನ್ನವಾಗುವುದು'

ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ||
ಪತಂತಿ ಪಿತರೋಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ||

ಗೀತಾ ||೧–೪೨||

'ವರ್ಣಸಾಂಕರ್ಯವು ಕುಲಘಾತಕರಿಗೂ ಮತ್ತು ಕುಲಕ್ಕೂ ನರಕಕ್ಕೆ ಕಾರಣವಾಗುವುದು. ಶ್ರಾದ್ಧಾದಿಗಳಿಂದ ವಂಚಿತರಾಗಿ ಇಂತಹ ಕುಲಘಾತಕರ ಪಿತೃಗಳೂ ಕೂಡಾ ಅಧೋಗತಿಯಲ್ಲಿ ಬೀಳುತ್ತಾರೆ'

ಎಂಬುದಾಗಿ ವಿಜ್ಞಾಪಿಸಿಕೊಂಡ ವಾಕ್ಯದಿಂದ ನಾವು ತಿಳಿಯಬಹುದಾದುದೇನಂದರೆ ದುಷ್ಟಸ್ತ್ರೀಯರಿಂದ ಅನರ್ಥ ಉಂಟಾಗುವುದೇ ಹೊರತು ಕುಲವತಿಯರಿಂದಲ್ಲ.

'ನಾರಿ ಸ್ವರ್ಗಕೆದಾರಿ ನಾರಿ ಪರರುಪಕಾರಿ........
.....................................ಮುನಿದರಾ
ನಾರಿಯೇ ಮಾರಿ ಸರ್ವಜ್ಞ || ೧ ||'

ಎಂಬುದಾಗಿ ಸರ್ವಜ್ಞ ಕವಿಯು ಹೇಳಿದಂತೆ ಸ್ತ್ರೀಯರು ದುಷ್ಟೆಯರಾದರೆ ಲೋಕಕ್ಕೆ ಅನಿಷ್ಟವಾಗುವುದೂ ನಿಶ್ಚಯ. ಇಂತಹ ಸ್ತ್ರೀಯರ ವಿಷಯದಲ್ಲಿ ಎಚ್ಚರದಿಂದಿರಿ ಎಂದು ಪುರುಷರನ್ನೂ ಸ್ತ್ರೀಯರನ್ನೂ ಎಚ್ಚರಿಸುವಾಗ ಸ್ತ್ರೀಯರ ದುಷ್ಟತನವನ್ನು ಅಲ್ಲಿಗಳೆದಿದ್ದರೆ ಸ್ತ್ರೀಸಮಾಜವನ್ನೇ ನಿಂದಿಸಿದಂತಾಯ್ತೆ? ಅಥವಾ ನಮ್ಮ ಧರ್ಮದಲ್ಲಿ ಪುರುಷರನ್ನು ಶ್ಲಾಘಿಸಿದ್ದರೂ ದುಷ್ಟರಾದ ಪುರುಷರನ್ನೂ ನಿಂದಿಸಿಲ್ಲವೆ?

**ಯಾರು ದುಷ್ಟರೋ ಯಾವುದು ದೌಷ್ಟ್ಯವೋ ಅಂಥವರನ್ನು ಅದನ್ನು ನಿಂದಿಸಿದರೆ ಅದು ಧರ್ಮದ ತಪ್ಪೇ?**

ಉತ್ತಮರಾದ ಸ್ತ್ರೀಯರಿಂದಲೇ ಒಂದು ಕಾಲದಲ್ಲಿ ನಮ್ಮ ನಾಡು ಸಿರಿಯ ಬೀಡಾಗಿತ್ತು. ಪತಿವ್ರತೆಯರಾಗಿ ಗ್ರಹಕರ್ಮದಲ್ಲಿ ದಕ್ಷತೆಯುಳ್ಳವರಾಗಿ ಸ್ತ್ರೀಯರು ನೀತಿಯ ತವುರಾಗಿದ್ದರೇನೇ ನಾಡು ಲಕ್ಷ್ಮಿಗೆ ನೆಲೆಯಾಗುವುದು. ಆದುದರಿಂದ ಸ್ತ್ರೀಯರು ಇವೆಲ್ಲವನ್ನೂ ಅರಿಯಲು ವಿದ್ಯಾವತಿಯರೂ ಆಗಿರಬೇಕು. ಸ್ತ್ರೀಯರು ಅಕ್ಷರ ಶತ್ರುಗಳಾಗಿರಬೇಕೆಂದು ನಮ್ಮ ಧರ್ಮದಲ್ಲಿಲ್ಲ. ಆದರವರು ಅಕ್ಷರ ಅಭ್ಯಾಸ ಮಾಡುವುದು ಸ್ವೇಚ್ಛಾವಿಹಾರಿಣಿಯರಾಗಿ ಕುಲಕಲಂಕಿತೆಯರಾಗಲಿಕ್ಕಲ್ಲ. ಗಾರ್ಗಿಯಂತಹ ವಿದ್ಯಾ ವಿನಯಸಂಪನ್ನೆಯರಿಗೆ ನಮ್ಮ ಧರ್ಮದಲ್ಲೂ ಧರ್ಮಿಷ್ಠರಲ್ಲೂ ಎಂದಿಗೂತುಂಬು ಪುರಸ್ಕಾರವಿದೆ. ಸಾವಿತ್ರಿಯಂತಹ ಪ್ರಾಜ್ಞೆಯರಿಗೆ ಸದಾ ಸ್ವಾಗತವೂ ಇದೆ. ಇಂತಹ ನಾರೀಮಣಿಯರು ಹೆಚ್ಚಿ ನಾಡಿನಭ್ಯುದಯವಾಗಲು ನಮ್ಮ ಧಾರ್ಮಿಕರು ಅನೇಕ ಸ್ತ್ರೀನೀತಿಯುಕ್ತ ಗದ್ಯ ಪದ್ಯಗಳನ್ನು ರಚಿಸಿ ನಾರಿಯರ ಮನಸ್ಸಿನ ಮೇಲೆ ತಮ್ಮ ಪ್ರಭಾವದಿಂದಾಗಿ ತಮ್ಮ ಉಪದೇಶ ವಾಕ್ಯಗಳು ಪರಿಣಾಮಕಾರಿಯಾಗುವಂತೆ ಮಾಡಿ ದೇಶದ ಹಿತವನ್ನು ಕೋರಿದ್ದಾರೆ. ಹೀಗೆ ಸ್ತ್ರೀನೀತಿಯನ್ನು ವಿಶೇಷ ದಕ್ಷತೆಯಿಂದ ಕಾಯ್ದುಕೊಂಡವರಲ್ಲಿ ಶ್ರೀ ಪುರಂದರ ದಾಸರೂ ಒಬ್ಬರು.

ಪುರಂದರ ದಾಸರಿಗೆ ಒಬ್ಬಳು ಮಗಳೂ ಇದ್ದಳು ಎಂಬುದನ್ನು ಈ ಹಿಂದೆಯೇ ಹೇಳಿರುವೆವು. ದಾಸರು ರತ್ನಪಡಿ ವ್ಯಾಪಾರದಲ್ಲಿರುವಾಗಲೇ ಈ ಮಗಳನ್ನು ತಮ್ಮ ಘನತೆಗೆ ಸರಿಯಾದ ಶ್ರೀಮಂತರ ಸಂಬಂಧವನ್ನು

ಬೆಳೆಸಿ ವಿವಾಹ ಮಾಡಿದ್ದರು. ಆಗ ಎಷ್ಟು ಜಿಪುಣರಾಗಿದ್ದರೂ ಮಗಳಿಗೆ ಬಳುವಳಿಯನ್ನು ತಕ್ಕಮಟ್ಟಿಗಾದರೂ ಕೊಟ್ಟು ಕಳುಹಿಸದೆ ಗಂಡಿನವರು ಬಿಟ್ಟಿರಲಾರರು. ತಂದೆಯು ಹರಿದಾಸರಾದುದನ್ನು ಕೇಳಿ ದಾಸರ ಮಗಳು ಒಮ್ಮೆ ತಂದೆಯನ್ನು ನೋಡಲು ಬಂದಳಂತೆ. ತಂದೆಯ ಈ ಬದಲಾವಣೆಯಲ್ಲಿ ಮಗಳಿಗೆ ತೃಪ್ತಿಯೇ ಆಯ್ತು; ತಂದೆಯು ರತ್ನಪಡಿ ವ್ಯಾಪಾರದಲ್ಲಿದ್ದಾಗ ಅವರಲ್ಲಿ ಶಾಂತತೆಯೇ ಇರಲಿಲ್ಲ. ಈಗ ಪ್ರಶಾಂತಚಿತ್ತರಾಗಿ ಶ್ರೀಹರಿ ಸ್ಮರಣಾನಂದದಲ್ಲಿ ತಲ್ಲೀನರಾಗಿದ್ದಾರೆ. ಆ ಮಗಳೂ ಭಾಗ್ಯಶಾಲಿನಿಯು. ತಂದೆಯೊಂದಿಗೆ ತಾನೂ ಹರಿಸ್ಮರಣೆ ಮಾಡುತ್ತಾ ತಂದೆಯಿಂದ ಅನೇಕ ತತ್ವಗಳನ್ನು ಕೇಳಿ ತಿಳಿದುಕೊಂಡು ಸ್ವಲ್ಪ ಕಾಲ ತವರು ಮನೆಯಲ್ಲಿದ್ದು ಪುನಃ ಗಂಡನ ಮನೆಗೆ ಹೊರಡುವಾಗ ತಾಯಿ ತಂದೆಗಳಿಗೆ ನಮಸ್ಕರಿಸಿ ಅನುಜ್ಞೆಯನ್ನು ಕೇಳಿದಳು. ದಾಸರು ಮಗಳನ್ನು ಬಳಿಗೆ ಕರೆದುಕೂಡಿಸಿಕೊಂಡು ಮುಡಿಯನ್ನು ನೇವರಿಸಿ 'ಮುದ್ದು ಮಗಳೇ ನೀನು ಪ್ರಥಮಬಾರಿ ಪತಿಯ ಗೃಹಕ್ಕೆ ತೆರಳುವಾಗ ಬೇಕಾದ್ದು ಬಂಗಾರ ಬೆಳ್ಳಿಯೇ ಮೊದಲಾದವುಗಳನ್ನು ಬಳುವಳಿಯಾಗಿ ಕೊಟ್ಟು ಕಳಿಸಿದ್ದೆವು. ಆದರೆ ಈಗ ನಮ್ಮಲ್ಲಿ ಆ ವಸ್ತುಗಳಿಲ್ಲ. ಆದರೆ ಒಂದೆ ನಾವು ನಿನಗೆ ಕೊಟ್ಟ ಬಳುವಳಿಯು ಅಶಾಶ್ವತವು; ಈಗ ಶಾಶ್ವತವಾದ ಬಳುವಳಿಯನ್ನು ಕೊಡುವೆವು—ಹಿಂದೆ ನಿನಗೆ ಕೊಟ್ಟ ಬಳುವಳಿಯಿಂದ ನಿನಗೆ ಮಾತ್ರ ಲೌಕಿಕ ಉಪಯೋಗವಾಗಿದ್ದರೂ ಇರಬಹುದು. ಆದರೆ ಈಗ ಕೊಡುವ ಬಳುವಳಿಯು ನಿನಗೆ ಮಾತ್ರವಲ್ಲ ಎಲ್ಲ ಹೆಣ್ಣುಮಕ್ಕಳಿಗೂ ಶಾಶ್ವತ ಮಂಗಳವನ್ನೀಯುವಂಥದು' ಎಂದಂದು—

**ಶಂಕರಾಭರಣ ರಾಗ ಆದಿ ತಾಳ**

ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ ಮಗಳೆ ॥ ಪ ॥
ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ ॥ ಅ ॥ ಪ ॥
ಅತ್ತೆ ಮಾವರಿಗಂಜಿಕೊಂಡು ನಡೆಯಬೇಕಮ್ಮ ಮಗಳೆ।
ಚಿತ್ತವಲ್ಲಭನಕ್ಕರೆಯನ್ನು ಪಡೆಯಬೇಕಮ್ಮ ॥

ಹೊತ್ತು ಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ ಮಗಳೆ।
ಹತ್ತುಮಂದಿ ಒಪ್ಪುವಹಾಗೆ ಬಾಳಬೇಕಮ್ಮ॥ ॥ ೧ ॥

ಅಟ್ಟು ಉಂಬುವಕಾಲದಲ್ಲಿ ಆಟಬೇಡವ್ಮ ಮಗಳೆ।
ಕಟ್ಟೆಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ॥
ಕಟ್ಟಿ ಆಳುವ ಗಂಡನೊಡನೆ ಸಿಟ್ಟುಬೇಡಮ್ಮ ಮಗಳೆ॥
ಕೆಟ್ಟನಡತೆ ಹೆಂಗಸರೊಡನೆ ಸೇರಬೇಡಮ್ಮ॥ ॥ ೨ ॥

ನೆರೆಹೊರೆಯವರಿಗೆ ನಾ[illegible]ಸೀತಿ ಹೇಳಬೇಡಮ್ಮ ಮಗಳೆ।
ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ॥
ಪರರನಿಂದಿಪ ಹೆಂಗಸರೊಡನೆ ಸೇರಬೇಡಮ್ಮ ಮಗಳೆ।
**ಪುರಂದರ ವಿಠಲನ ಚರಣಸ್ಮರಣೆ ಮರೆಯಬೇಡಮ್ಮ** ॥ ೩ ॥

ಅಲ್ಲದೆ— **ಬಂಗಾರವಿಡಬಾರೇ ನಿನಗೊಪ್ಪುವ ಬಂಗಾರವಿಡಬಾರೇ॥**
**ರಂಗನಾಥನ ದಿವ್ಯ ಮಂಗಳ ನಾಮವೆಂಬ ಬಂಗಾರವಿಡಬಾರೇ'॥**

ಎಂಬುದಾಗಿಯೂ, ಅಲ್ಲದೆ ಸ್ತ್ರೀಯರಿಗೆಲ್ಲಾ ಪರಮೋಪಕಾರವಾಗುವಂತೆ ಶ್ರೀ ಪುರಂದರ ದಾಸವರ್ಯರು ತಮ್ಮ ಮಗಳಿಗೆ ಪತಿವ್ರತೆಯರ ಧರ್ಮವನ್ನು ತಿಳುಹಿಸುವಾಗ ಸತಿ ಅನುಸೂಯಾ ದೇವಿಯ ಚರಿತ್ರೆಯನ್ನು ಪದ್ಯರೂಪದಲ್ಲಿ ಉಪದೇಶಿಸಿದ್ದಾರೆ. ಅನುಸೂಯಾ ಚರಿತ್ರೆಯಲ್ಲಿನ ಒಂದು ಪದ್ಯವಿದು.

**ರಾಗ ಭೂಪಾಳಿ ತಾಳ ಅಟ**

ಪತಿಯೇ ಪರದೇವತೆ ಎಂದೂ ಸತಿಯರಿಗೆ ಬಂಧು ॥ ಪ ॥

ಪತಿಯ ಬಳಿಯಲ್ಲಿ ಸಕಲತೀರ್ಥಗಳುಂಟು
ಪತಿಯ ಬಳಿಯಲ್ಲಿ ಸಕಲ ಕ್ಷೇತ್ರಂಗಳು ॥
ಮಿತಿಯಿಲ್ಲದಾನಂದ ತತಿಯಿರುವುದು ಅಲ್ಲಿ
ಗತಿಗೊಡುವ ದೈವವ, ಬೇರೆ ಚಿಂತಿಸ ಬೇಡ ॥ ೧ ॥

ಪತಿಯ ಸೇವೆಯೆ ಸಕಲ ವ್ರತಂಗಳು
ಪತಿಯ ಭಜಿಸುವುದು ಸಕಲ ಯಜ್ಞಗಳು॥

ಪತಿಯ ಹೃದಯದಲ್ಲಿ ರತಿಪತಿಪಿತನೆಂದು
ಮತಿಯಿಂದ ಭಜಿಸಲು ಗತಿಕೊಡುವನುದೇವ ॥ ೨ ॥

**ಪತಿಯ ನಿಂದಿಸುವಳು ಪಾತಕಿಯಾಗುವಳು**
**ಪತಿಯ ವಚನಂಗಳಿಗೆ ಬದಲು ಹೇಳುವಳ॥**
**ಗತಿಯ ತಪ್ಪಿಸುವನು ಪುರಂದರ ವಿಠಲನು**
**ಮತಿಯುಳ್ಳವರು ಇದನರಿತು ನಡೆಯಬೇಕು ॥ ೩ ॥**

ಹೀಗೆಹಾಡಿ ಹರಸಿ ಕಳುಹಿಸಿದರು. ದಾಸರಿಂದುಪದಿಷ್ಟವಾದ ಈ ಸ್ತ್ರೀನೀತಿ ಸಂಗ್ರಹದಲ್ಲಿ 'ಶುಶ್ರೂಷಸ್ವ ಗುರೂನ್' ಇತ್ಯಾದಿ ವಾಕ್ಯಗಳಲ್ಲಿ ಕಾಳಿದಾಸಕವಿಯು ಏನು ಸ್ತ್ರೀನೀತಿಯನ್ನು ಸಂಗ್ರಹಿಸಿ ಕಣ್ವರ ಮುಖದಿಂದ ಶಕುಂತಲೆಗೆ ಪತಿಮಂದಿರದಲ್ಲಿರಬೇಕಾದ ಸ್ತ್ರೀಯರ ವಿಧಾನವನ್ನು ವಿವರಿಸಿರುವನೋ ಅಂತೆಯೇ ಇಲ್ಲೂ ಸರಳವಾದ ಶೈಲಿಯಲ್ಲಿ ಸ್ತ್ರೀ ನೀತಿಯನ್ನು ಕಾಣಬಹುದು. ಪ್ರತಿಯೊಬ್ಬ ನಾರಿಯೂ ದಾಸರ ಈ ಅಮೃತವಾಣಿಯನ್ನು ಅಭ್ಯಸಿಸಿ ಅನುಷ್ಠಾನದಲ್ಲಿ ತಂದರೆ ನಮ್ಮ ದೇಶ ವಿಭವದ ಕೋಶ' ನಮ್ಮ ರಾಜ್ಯ ನಿಜವಾಗಿ ರಾಮರಾಜ್ಯವಾಗುವುದರಲ್ಲಿ ಸಂದೇಹವೇನು?

## ತೀರ್ಥಯಾತ್ರೆಯಲ್ಲಿ–

## ದಾಸರು ಉಡುಪಿಯಲ್ಲಿ

ಕರ್ಣಾಟಕ ಹರಿದಾಸರು ಪಂಢರಪುರ, ತಿರುಪತಿ, ಉಡುಪಿ ಈ ಮೂರು ಕ್ಷೇತ್ರಗಳನ್ನು ಸಂದರ್ಶಿಸದಿಲ್ಲ. ದಾಸರು ತೀರ್ಥಯಾತ್ರೆಗೆ ಹೊರಟವರು ಉಡುಪಿಗೆ ಬಂದರು. ದಾಸರಿಗೆ ಚಿರಪರಿಚಿತರು ಶ್ರೀಮದ್ಭಾವಿಸಮೀರ ಶ್ರೀ ವಾದಿರಾಜ ಸ್ವಾಮಿಗಳು. ದಾಸರು ಬರುವಾಗ ವಾದಿರಾಜರು ಉಡುಪಿಯಲ್ಲೇ ಇದ್ದರು. ಹರಿದಾಸರಿಗೆ ದೇಶದಾದ್ಯಂತದಲ್ಲಿ ಮಹಾಗೌರವವಿದ್ದ ಕಾಲವದು. ಶ್ರೀ ಪುರಂದರ ದಾಸರನ್ನು ವಾದಿರಾಜರು ಗೌರವದಿಂದ ಬರಮಾಡಿಕೊಂಡರು. ಒಂದು ಕಾಲದಲ್ಲಿ ರಾಜರುಗಳಿಗೆ, ಒಂದು ಕಾಲದಲ್ಲಿ ಸನ್ಯಾಸಿಗಳಿಗೆ, ಒಂದು ಕಾಲದಲ್ಲಿ ಹರಿದಾಸರಿಗೆ, ಒಂದು ಕಾಲದಲ್ಲಿ ಕವಿಗಳಿಗೆ, ಒಂದು ಕಾಲದಲ್ಲಿ ಧನವಂತರಿಗೆ ವಿಶೇಷ

ಮಾನ್ಯತೆಯಿತ್ತು. ಹೀಗೆ ಬೇರೆ ಬೇರೆ ಕಾಲದಲ್ಲಿ ವಿವಿಧ ಯೋಗ್ಯತಾ ವಂತರಿಗೆ ಗೌರವವು ಸಲ್ಲುವುದು ಪ್ರಕೃತಿಯನಿಯಮ. ಇಂದು ಜನತೆಯು ಗೌರವಿಸುತ್ತಿರುವುದು ಸ್ವಲ್ಪಮಟ್ಟಿಗೆ ಧನವಂತರನ್ನು, ಮಂತ್ರಿಗಳನ್ನು. ಹೆಚ್ಚಿನ ಗೌರವವು ಸುಧಾರಕರಿಗೆ ಸಲ್ಲುತ್ತಿದೆ. ಇರಲಿ ಹರಿದಾಸರಿಗೂ, ಒಂದು ಕಾಲದಲ್ಲಾದರೂ ಗೌರವ ಆದರಗಳು ಸಲ್ಲುತ್ತಿತ್ತಲ್ಲ ಅಷ್ಟೇ ಸಂತೋಷ. ಪುರಂದರ ದಾಸರಂತೂ ಹರಿದಾಸ ಪೀಠದಲ್ಲಿ ವ್ಯಾಸರಾಜ ರಿಂದಭಿಷಿಕ್ತರಾಗಿ ಹರಿದಾಸ ಪೀಠದ ಸಂಪೂರ್ಣ ಗೌರವವನ್ನು ಕಾದು ಕೊಂಡವರು. ಅಲ್ಲದೆ ವಾದಿರಾಜರು ಹರಿಭಕ್ತರಲ್ಲಿ ಮುಖ್ಯರಾದ ಮುಖ್ಯ ಪ್ರಾಣದೇವರ ಪದವಿಗೆ ಬರುವವರು. ಹೀಗಿರಲು ಹರಿದಾಸ ಶ್ರೇಷ್ಠರಾದ ಪುರಂದರ ದಾಸರನ್ನು ಆದರಿಸಿದರೆಂದರೆ ಆಶ್ಚರಿಯೇನು! ಇನ್ನು ಹರಿದಾಸ ರಿಗೆ ಸನ್ಯಾಸಿಗಳೇ ದಿಕ್ಕು. ಸನ್ಯಾಸಿಗಳು ಹರಿದಾಸರ ಮೇಲೆ ಸಂಪೂರ್ಣ ಕೃಪೆಯನ್ನು ಇಟ್ಟಿರುವುದೂ ನಮ್ಮ ಕರ್ಣಾಟಕ ಹರಿದಾಸರ ಚರಿತ್ರೆಗಳಲ್ಲಿ ಅಲ್ಲಲ್ಲಿ ಸ್ಪಷ್ಟವಾಗಿ ಕಂಡು ಬರುವುದು. ಶ್ರೀ ವಾದಿರಾಜಸ್ವಾಮಿಗಳಲ್ಲಿ ದಾಸರಿಗೆ ಅತ್ಯಂತ ಭಕ್ತಿ. ಶ್ರೀ ವಾದಿರಾಜರಿಗೆ ದಾಸರಲ್ಲಿ ಬಹು ಪ್ರೇಮ.

ದಾಸರು ವಾದಿರಾಜರ ದರ್ಶನಮಾಡಿ ಕ್ಷೇತ್ರ ಮೂರ್ತಿಯಾದ ಅನಂತಾಸನ ದೇವರನ್ನೂ, ಶ್ರೀ ಚಂದ್ರಮೌಳೀಶ್ವರ ದೇವರನ್ನೂ, ಶ್ರೀಮದಾಚಾರ್ಯರ ಕರಾರ್ಚಿತನಾದ ಶ್ರೀ ಉಡುಪಿ ಶ್ರೀ ಕೃಷ್ಣನ ದರ್ಶನವನ್ನು ಮಾಡಿದರು. ಅಷ್ಟ ಮಠದ ಯತಿಗಳ ದರ್ಶನಮಾಡಿದರು. ಮಧ್ವಸರೋವರ ಸ್ನಾನದಿಂದ ತಾವು ಪುನೀತರೆಂದುಕೊಂಡು ಅಷ್ಟ ಮಠದ ಯತಿವರೇಣ್ಯರಿಂದ ಇಷ್ಟಪೂಜೆಗಳನ್ನು ಸ್ವೀಕರಿಸುತ್ತಿರುವ ಕಡಗೋಲು. ನೇಣು ಪಿಡಿದ ಚೆಲುವ ಉಡುಪಿನ ಕೃಷ್ಣನನ್ನು ನಾನಾವಿಧವಾಗಿ ಕೊಂಡಾಡಿದರು. §

§ ಶ್ರೀ ಉಡುಪಿ ಕ್ಷೇತ್ರ ಮಾಹಾತ್ಮ್ಯವನ್ನೂ ಶ್ರೀ ಉಡುಪಿ ಶ್ರೀ ಕೃಷ್ಣನ ಮಹಿಮೆಯನ್ನೂ ಶ್ರೀಮನ್ಮಧ್ವಾಚಾರ್ಯರ ಮತ್ತು ಶ್ರೀ ಮಧ್ವಸರೋವರದ ಮಹಿಮೆಯನ್ನೂ ನಮ್ಮ ಮಾಲೆಯಿಂದ ಮುಂದೆ ಪ್ರಕಟವಾಗಲಿರುವ "ಭಕ್ತ

ದಾಸರು ಶ್ರೀಕೃಷ್ಣನ ಸನ್ನಿಧಾನದಲ್ಲಿ ಕೆಲಕಾಲಇದ್ದರು. ಇಲ್ಲೂ ಕೆಲವು ಮಹಿಮೆಗಳನ್ನು ಪ್ರಕಟಿಸಿರುವರು.

ಒಂದು ಏಕಾದಶೀ ರಾತ್ರಿ ಜಾಗರಣೆಯಲ್ಲಿ ಹರಿಭಜನೆಯಲ್ಲಿ ದಾಸರು ತಲ್ಲೀನರಾಗಿದ್ದರು. ಬೆಳಗಾದರೆ ಸಾಧನೆ ದ್ವಾದಶಿ ಪಾರಣೆ ಮುಗಿಯಬೇಕು. ಹೀಗಾಗಿ ವಾದಿರಾಜರು ಮಹಾಪೂಜಾದಿಗಳನ್ನು ಮುಗಿಸಿ ತೀರ್ಥದ ಸಮಯದಲ್ಲಿ ದಾಸರಿಗೆ ಹೇಳಿಕಳಿಸಿದರು. ದಾಸರು ಶ್ರೀಕೃಷ್ಣನ ಸಮ್ಮುಖದಲ್ಲಿ ಮಹದಾನಂದ ಪರವಶರಾಗಿ ಹರಿನಾಮಸಂಕೀರ್ತನೆ ಮಾಡುತ್ತಾ ಕುಣಿಯುತ್ತಿದ್ದವರು 'ಸ್ವಾಮಿಗಳ ಆಜ್ಞೆಯಾಗಿದೆ ಬರಬೇಕಂತೆ' ಎಂದು ಪರಿಚಾರಕನು ಹೇಳಿದಾಕ್ಷಣ ಸ್ನಾನವನ್ನೂ ಮಾಡದೇ ಹಾಗೇ ಹೋಗಿ ತೀರ್ಥಕ್ಕೆ ಕೈಹಿಡಿದರು. ಭೋಜನಕ್ಕೂ ಪಂಕ್ತಿಯಲ್ಲಿ ಬಂದು ಕುಳಿತರು. ಅನೇಕರು ದಾಸರು ಸ್ನಾನವನ್ನು ಮಾಡದೆ ತೀರ್ಥಕ್ಕೆ ಕೈಹಿಡಿದು ಭೋಜನಕ್ಕೆ ಸಿದ್ಧರಾದುದನ್ನು ಕಂಡುಕೊಂಡಿದ್ದರು—ಅವರಲ್ಲೊಬ್ಬನು 'ದಾಸರಿಗೆ ಆಕಾಶ ಗಂಗಾಸ್ನಾನವಾಗಿರಬೇಕು' ಎಂದು ಹಂಗಿಸಿದನು. ಇನ್ನೊಬ್ಬನು—'ಅಲ್ಲ ಜ್ಞಾನಸ್ನಾನವಾಗಿರಬೇಕು' ಎಂದನು. ಮತ್ತೊಬ್ಬನು—'ನಿತ್ಯ ಶುದ್ಧರು' ಎಂದನು. ಇನ್ನೊಬ್ಬನು 'ಸ್ವಪ್ನದಲ್ಲಾದರೂ ಆಗಿರಬಹುದು' ಎಂದನು. ಹೀಗೆ ವಾದಿರಾಜರಿಗೆ ಕೇಳುವಂತೆ ನಾನಾಪ್ರಕಾರವಾಗಿ ಮಡಿವಂತರು ಹಂಗಿಸಲು ವಾದಿರಾಜರು 'ಅವರೇನಪ್ಪಾ ಮನಸ್ಸುಮಾಡಿದರೆ ಗಂಗಾದೇವಿಯನ್ನು ಇಲ್ಲಿಗೇ ಕರೆಸುವರು' ಎಂದರು. ಆಗ ಅತಿ ನಿಷ್ಠುರಿಯೊಬ್ಬನು 'ಹಾಗಿದ್ದರೆ ಕರೆಸಲಿ ನಾವೂ ಅಭಿನವ ಭಗೀರಥರನ್ನುಕಂಡು ಭಾಗೀರಥೀ ಸ್ನಾನಮಾಡಿಬಿಡಬೇಕೆಂದಿರುವೆವು' ಅಂತ ಹೇಳಿಬಿಟ್ಟನು. ವಾದಿರಾಜರು 'ದಾಸರೇ! ಆಗಲಿ! ಬಹುಮಂದಿ ಗಂಗಾಸ್ನಾನಾತುರರಾಗಿದ್ದಾರೆ, ಅವರ ಇಚ್ಛೆಗೇಕೆ ಭಂಗತರಬೇಕು' ಎಂಬುದಾಗಿ ಹೇಳಿ ನಕ್ಕರು--ದಾಸರು 'ಮಹದಾಜ್ಞಾ!' ಎಂದವರೆ—

---

ಮಧ್ವಾಚಾರ್ಯರು "ಮತ್ತು ಭಕ್ತ ವಿಜಯದಾಸರು" ಈ ಎರಡು ಮೊಗ್ಗೆಗಳಲ್ಲಿ ಸ್ಥಳ ಪುರಾಣ, ಶ್ರೀಮತ್ಸುಮಧ್ವವಿಜಯ ಮಹಾಕಾವ್ಯ, ಅಪರೋಕ್ಷಿಗಳ ಪದ ಸುಳಾದಿ ಉಗಾಭೋಗಗಳ ಆಧಾರದೊಂದಿಗೆ ವಿವರವಾಗಿ ಕೊಡಲಿರುವೆವು. ಆದುದರಿಂದ ಇಲ್ಲಿ ಸಂಕ್ಷೇಪವಾಗಿ ಹೇಳಲಾಗಿದೆ.

### ರಾಗ ಮೋಹನ ಆದಿತಾಳ

ಬಾರವ್ವ ಭಾಗೀರಥಿ ತೋರವ್ವ ಜನರಿಗೆ ॥ ಪ ॥
ಬಾರವ್ವ ಸ್ನಾನಮಾಡುವುದ ತೋರವ್ವ ಜನರಿಗೆ ॥ ಅ ॥ ಪ ॥

ವರ ವಾದಿರಾಜರು † ಭೋಜನಕೆ ಕರೆಯೆ
ತ್ವರಿತದಲಿ ಬಂದು ಪಂಕ್ತಿಲಿ ಕುಳಿತೆನು ॥ ೧ ॥

ದಾಸನ ನುಡಿಕೇಳಿ ಲೇಸಾಗಿ ನೀಬಂದು
ಗ್ರಾಸಕೊಂಬುವ ಜನಕೆ ಲೇಸು ಮಾಡವ್ಮ ॥ ೨ ॥
ಈ ಮಹಿಮೆಯ ನೋಡಲೀಮಹಯತಿವರರು
ಸ್ವಾಮಿ ಪುರಂದರ—ವಿಠಲನ ಭಕ್ತರು ॥ ೩ ॥

ಹೀಗೆ ಗಂಗಾದೇವಿಯನ್ನು ಸ್ತುತಿಸಲು ಜಲರೂಪದಿಂದ ಗಂಗಾದೇವಿಯು ಪ್ರತ್ಯಕ್ಷಳಾದಳು. ಬಡಿಸಿಯಾಗಿತ್ತು. ಭೋಜನಕ್ಕೆ ಕೂಡಲುಸಿದ್ಧವಾಗಿದ್ದ ಸಮಯ. ಎಲ್ಲರ ಎಲೆಗಳೂ ತೇಲಿಹೋಗಿ ಭೋಜನಕ್ಕೆ ಬಂದವರಿಗೆ ಬಾಧಕವಾಗಬಾರದೆಂದು ದಾಸರು ಪುನಃ ಗಂಗಾದೇವಿಯನ್ನು ಪ್ರಾರ್ಥಿಸಲು ಗಂಗೆಯು ಅದೃಶ್ಯಳಾದಳು. ಎಲ್ಲರ ಭೋಜನವಾಯ್ತು.

ಇಷ್ಟಾದರೂ ಮಠದವನೊಬ್ಬನು 'ಇದೆಲ್ಲಾ ಏನೋ ಇಂದ್ರಜಾಲ ವಿದ್ಯೆಯೆನ್ನಲು' ವಾದಿರಾಜರು 'ದಾಸರೇನುಮಾಡುವರೆಂಬುದನ್ನು ದಾಸರ ಹಿಂದೇ ಹೋಗಿ ನೋಡಿ ಬಾ! ಆದರೆ ಒಂದು ಕಣ್ಣು ಮುಚ್ಚಿಕೊಂಡು ಇನ್ನೊಂದು ಕಣ್ಣಿನಿಂದ ನೋಡು' ಎಂಬುದಾಗಿ ಹೇಳಿ ಅವನನ್ನು ದಾಸರ ಹಿಂದೆ ಕಳುಹಿಸಿದರು.

---

† "ವರವ್ಯಾಸರಾಜರು" ಎಂಬ ಪಾಠಾಂತರವೂ ಇದೆ. ಈ ಮಹಿಮೆಯು ವ್ಯಾಸರಾಜರ ಬಳಿಯಲ್ಲಿ ನಡೆಯಿತೆಂದು ಈ ಪಾಠದಿಂದ ತಿಳಿಯುವುದು. ನಮಗೆ ದೊರೆತ ಆಧಾರವಂತೆ ವಾದಿರಾಜರ ಬಳಿಯಲ್ಲಿ ನಡೆದುದೆಂಬುದಕ್ಕೇ ಹೆಚ್ಚಿನ ಆಧಾರಗಳು ದೊರೆತಿವೆಯಾದುದರಿಂದ ಅದನ್ನೇ ಉದಾಹರಿಸಲಾಗಿದೆ.

ದಾಸರು ಭೋಜನಾನಂತರ ಮಠದಿಂದ ಹೊರಟು ಅಬ್ಜಾರಣ್ಯದ ಮಧ್ಯೆ ಇರುವ ಒಂದು ಕೆರೆಯ ಬಳಿಗೆ ಬಂದು ಆ ಕೆರೆಯ ದಂಡೆಯಲ್ಲಿ ಅಂದು ತಾವು ಭೋಜನ ಮಾಡಿದ ಪದಾರ್ಥಗಳನ್ನೆಲ್ಲಾ ಬಾಯೊಳಗೆ ಕೈ ಹಾಕಿ ಒಂದೊಂದನ್ನಾಗಿ ತೆಗೆದಿಡತೊಡಗಿದರು. ಅವುಗಳಿಂದಿನ್ನೂ ಹೊಗೆಯೇಳುತ್ತಿತ್ತು; ದಾಸರನ್ನು ಪರೀಕ್ಷಿಸಲು ದಾಸರಿಗರಿಯದಂತೆ ಹಿಂಬಾಲಿಸಿದವನು ವಾದಿರಾಜರಾಜ್ಞೆಯಾದಂತೆ ಒಂದೇ ಕಣ್ಣಿನಿಂದ ಇವನ್ನೆಲ್ಲಾ ನೋಡುತ್ತಾ ಬೆರಗಾಗಿ ವಾದಿರಾಜರ ಬಳಿಗೆ ಓಡಿಬಂದು ನಡೆದುದನ್ನೆಲ್ಲಾ ತಿಳಿಸಿದನು. ಅಷ್ಟರ ತನಕ ಒಂದು ಕಣ್ಣನ್ನು ಮುಚ್ಚಿಕೊಂಡೇ ಇದ್ದನು. ವಾದಿರಾಜರು ಎರಡೂ ಕಣ್ಣುಗಳನ್ನು ಬಿಡಹೇಳಲು ಬಿಟ್ಟನು. ಯಾವ ಕಣ್ಣಿನಿಂದ ದಾಸರನ್ನು ಪರೀಕ್ಷಿಸಿದ್ದನೋ ಆ ಕಣ್ಣು ಕೃಷ್ಣಾರ್ಪಣವಾಗಿತ್ತು. ಮುಚ್ಚಿಕೊಂಡಿದ್ದ ಕಣ್ಣು ಮಾತ್ರ ಉಳಿಯಿತು. ವಾದಿರಾಜರ ಆಜ್ಞೆಯನ್ನು ಪರಿಪಾಲಿಸಿ ಒಂದು ಕಣ್ಣನ್ನು ಮುಚ್ಚಿಕೊಂಡುದರಿಂದ ಅದಾದರೂ ಉಳಿಯಿತು.

ವಾದಿರಾಜರು "ದೊಡ್ಡವರ ಮೇಲೆ ಇಲ್ಲಸಲ್ಲದ ಆರೋಪವನ್ನು ಮಾಡುವುದೂ ದೊಡ್ಡವರನ್ನು ಪರೀಕ್ಷಿಸ ಹೋಗುವುದೂ ಮಹಾ ಅನರ್ಥಕಾರಕವು" ಎಂದರು. ಕಣ್ಣು ಕಳಕೊಂಡವನು ಸರ್ವಾಪರಾಧವಾಯ್ತೆಂದನು.

ದಾಸರ ಈ ಮಹಿಮೆಯಿಂದ ದಾಸರಿಗೆ ಆಚಾರದಲ್ಲಿ ಶ್ರದ್ಧೆಯಿರಲಿಲ್ಲವೆಂದು ತಿಳಿಯಬಾರದು. ದಾಸರ ಪದಸುಳಾದಿ ಉಗಾಭೋಗಗಳಲ್ಲಿ ಶೌಚಾಚಾರ ಪದ್ಧತಿಗಳನ್ನು ಬೇಕಾದಷ್ಟು ಕಾಣಬಹುದು ಉದಾಹರಣೆಗಾಗಿ—

### ಉಗಾಭೋಗ

'ನುಡಿವೆ ಲಿಂಗ ಶೌಚಕ್ಕೊಮ್ಮೆ  
ಗುದಕ್ಕೆ ಮೂರು ನೆಲ್ಲಿ ಕಾಯಷ್ಟು ಮಣ್ಣು  
ಸಲಿಸಿ ನೀರೊಳು ತೊಳೆದು ಬಲಗೈಗೆ ಐದು ಬಾರಿ ಮಣ್ಣು  
ಎಡಗೈಗೆ ಏಳು ಬಾರಿ ಮಣ್ಣು

ಜೋಡು ಪಾದಕ್ಕೆ ಐದಯ್ದು ಬಾರಿ ಮಣ್ಣು
ಐದು ಕಡೆಯೊಳಿಟ್ಟು ಪುರಂದರ ವಿಠಲಎನ್ನು ॥ '

ಈ ಉಗಾಭೋಗದಲ್ಲಿ ಕಾಣಬಹುದು. ಅಲ್ಲದೆ ದಾಸರೂ ಈ ಪ್ರಕಾರ ಆಚರಿಸಿದವರೇ ಎಂದು ಆಡಿದಂತೆ ನಡೆಯುವವರೆಂದಾದ ಮೇಲೆ ಪ್ರತ್ಯೇಕ ಹೇಳಬೇಕಾಗಿಲ್ಲ. ಹಾಗಾದರೆ ದಾಸರು ಸ್ನಾನ ಮಾಡದೆ ಭೋಜನಕ್ಕೆ ಬರಬಹುದೆ ಎಂದರೆ, ಕೆಲವೊಮ್ಮೆ ಜ್ಞಾನಿಗಳು—ಲೋಕಾಚಾರಕ್ಕೆ ವಿರೋಧವಾಗಿ ನಡೆಯುವುದೂ ಉಂಟು. ಅದನ್ನವರು ದಕ್ಕಿಸಿಕೊಳ್ಳಬಲ್ಲರು. ಅಲ್ಲದೆ ಇಲ್ಲಿ ದೊಡ್ಡವರನ್ನು ಕಾಯಿಸಬಾರದೆಂಬ ಧರ್ಮಸೂಕ್ಷ್ಮವನ್ನು ದಾಸರು ಪರಿಪಾಲಿಸಿರುವರು. ಹೇಗೆ ನೋಡಿದರೂ ಸದಾಚಾರಕ್ಕೆ ದಾಸರ ಆಚರಣೆಯಲ್ಲಿ ಕೊರತೆಯಿಲ್ಲ.

ಆದರೆ ಇಂಥಾ ಕತೆಗಳಿಂದ ನಾವೂ ದಾಸರಂತೆ ಸ್ನಾನ ಮಾಡದೆ ಊಟ ಮಾಡಿದರೆ ಸರಿ. ಮಹಾತ್ಮರಾಗುತ್ತೇವೆ ಎಂದು ತಿಳಿಯುವುದಲ್ಲ 'ಪೂರ್ವೇಷಾಂ ವಚನಂ ಗ್ರಾಹ್ಯಂ ಯುಕ್ತಿಃ ಕುತ್ರೋಪಯುಜ್ಯತೆ। ನಾರಿಕೇಳಾಸವಂ ಹೇಯಂ ಪೇಯಂ ತತ್ಫಲಜೋಧಕಂ' ಎಂಬ ದೊಡ್ಡವರವಾಕ್ಯದಂತೆ ಪೂರ್ವಿಕರ ಕಥೆಯಿಂದ ನಾವು ಅವರ ದಿವ್ಯತತ್ವಗಳನ್ನೂ ನೀತಿಪ್ರದವಾದ ವಿಷಯಗಳನ್ನು ಮಾತ್ರ ಆರಿಸಿಕೊಳ್ಳಬೇಕೇ ಹೊರತು ಎಲ್ಲವನ್ನೂ ಅವರು ಮಾಡಿದಂತೆ ನಾವು ಮಾಡಹೋಗುವುದಲ್ಲ. ತೆಂಗಿನ ಮರದಲ್ಲಿ ಹೆಂಡವೂ ಉತ್ಪನ್ನವಾಗುವುದು, ಎಳನೀರೂ ಉತ್ಪನ್ನವಾಗುವುದು; ಎರಡೂ ಒಂದೇಕಡೆಯಲ್ಲಿ ಉತ್ಪನ್ನವಾಗುವವುಗಳಾದುದರಿಂದ ಹೆಂಡವಾದರೇನು? ಎಳನೀರಾದರೇನು? ಯಾವುದೋ ಒಂದನ್ನು ಕುಡಿದರೆ ಸರಿ ಎಂಬ ಯುಕ್ತಿಯನ್ನು ಪಯೋಗಿಸುವುದೇನು? ಹನುಮಂತನು ಲಂಕೆಯನ್ನು ಸುಟ್ಟು ರಾಮಭಕ್ತನೆನಿಸಿದನು. ನಾವೂ ಯಾರ ಮನೆಯನ್ನಾದರೂ ಸುಟ್ಟರೆ ಸರಿ, ರಾಮಭಕ್ತರಾಗುತ್ತೇವೆಂದು ತಿಳಿಯುವುದೇನು? ಆದುದರಿಂದ ಪ್ರಾಜ್ಞರ ಆಜ್ಞೆಯಂತೆ ನಡೆಯಬೇಕೇ ಹೊರತು ಅವರಂತೆ ಎಲ್ಲಾ ಕಾರ್ಯಗಳನ್ನು ನಾವು ಮಾಡಲು ಯತ್ನಪಡಬಾರದು.

ದಾಸರು ಉಡುಪಿಯಿಂದ ಹೊರಡುವಾಗ ಶ್ರೀಕೃಷ್ಣನ ಚರಣಾರವಿಂದ ಗಳಲ್ಲಿ ಪ್ರಾರ್ಥಿಸಿದುದೇದೆಂದರೆ—

**ರಾಗ ಧನ್ಯಾಸಿ ತ್ರಿಪುಟಿ ತಾಳ**

**ಕರುಣಿಸೋ ಕೃಷ್ಣ ಕರುಣಿಸೋ ॥ ॥ ಪ ॥**
**ಎನ್ನ-ಮರಣಕಾಲದಿ ನಿನ್ನ ಸ್ಮರಣೆ ಒದಗುವಂತೆ ॥ಅ॥ಪ॥**
ರುಕುಮಾಂಗದನಂತೆ ವ್ರತವ ನಾನರಿಯೆನು
ಶುಕಮುನಿಯಂತೆ ತುತಿಸಲರಿಯೆ ॥
ಬಕವೈರಿಯಂತೆ ಧ್ಯಾನವ ಮಾಡಲರಿಯೆನು
ದೇ-ವಕಿದೇವಿಯಂತೆ ಮುದ್ದಿಸಲರಿಯೆನು ಕೃಷ್ಣ ॥ ೧ ॥
ಗರುಡನಂತೆ ಪೊತ್ತು ತಿರುಗಲಾರೆನು ನಾನು
ಕರೆಯಲರಿಯೆನು ಕರಿರಾಜನಂತೆ ॥
ವರಕಪಿಯಂತೆ ಸೇವೆಯ ಮಾಡಲರಿಯೆನು
ಸಿರಿ ದೇವಿಯಂತೆ ಮುದ್ದಿಸಲರಿಯೆನು ಕೃಷ್ಣ ॥ ೨ ॥
ಬಲಿಯಂತೆ ದಾನವಮಾಡಲಾರೆನು ಭಕ್ತಿ
ಛಲವನರಿಯೆನು ಪ್ರಲ್ಹಾದನಂತೆ ॥
ಒಲಿಸಲಾರೆನು ಅರ್ಜುನನಂತೆ ಸಖನಾಗಿ
ಸಲಹಿಕೊಳ್ಳಯ್ಯ ಶ್ರೀಪುರಂದರ ವಿಠಲ ॥

ಈ ಪದ್ಯದಲ್ಲಿ ನಾವು

**‘ಅಂತಕಾಲೇಚ ಮಾಮೇವ ಸ್ಮರನ್ಮುಕ್ತ್ವಾಕಲೇವರವ್ |**
**ಯಃ ಪ್ರಯಾತಿ ಸಮದ್ಭಾವಂ ಯಾತಿನಾಸ್ತ್ಯತ್ರ ಸಂಶಯಃ’ ॥ ಗೀತಾ॥೮-೫॥**
**(‘ಸಂತತಂ ಚಿಂತಯೇನಂತಂ ಅಂತಕಾಲೇವಿಶೇಷತಃ’ |)**

**ಶ್ರೀಮನ್ಮಧ್ವಾಚಾರ್ಯರು**

ಇವೇ ಮೊದಲಾದ ಶಾಸ್ತ್ರ ವಾಕ್ಯಗಳ ಸಾರವನ್ನು ಪಲ್ಲವಿಯಲ್ಲೇ ಕಾಣಬಹುದು. ದಾಸರ ದೇವರ ನಾಮಗಳ ಪ್ರತಿಯೊಂದು ನುಡಿಯ

ಕೊನೆಯೂ ಪಲ್ಲವಿಗೆ ಹೊಂದಬೇಕು. ಇದು ಅಪರೋಕ್ಷಿಗಳ ಕೃತಿಗಳ ಲಕ್ಷಣ. ಹಾಗೆ ಹೊಂದಿಸಿ ನೋಡಿದಾಗ ಈ ಪದ್ಯದ ವೈಶಿಷ್ಟ್ಯವು ತಿಳಿಯುವುದು. **ಮರಣ ಕಾಲದಲ್ಲಿ ಪರಮಾತ್ಮನ ಸ್ಮರಣೆ ಒದಗುವುದೇ ದುರ್ಲಭವೆಂಬುದು ಜಡಭರತ ಯೋಗಿಯ ಚರಿತ್ರೆಯಿಂದ ಸ್ಪಷ್ಟವಾಗುವುದು. ಒದಗಿದರೆ ಪರಮ ಲಾಭವೆಂಬುದೂ ಶಾಸ್ತ್ರದಲ್ಲಿ ನಿಶ್ಚಿತವಾದ ವಿಷಯ**. ಅದಕ್ಕಾಗಿ ದಾಸರು ತಾವು ಹರಿನಾಮ ಸ್ಮರಣೆಯ ಮಹತ್ವವನ್ನು ಜಗತ್ತಿಗೆ ಅರುಹಿ ಹರಿಯನ್ನು ಸಂತುಷ್ಟಿಪಡಿಸಲು ಅವತರಿಸಿದವರಾದುದರಿಂದ ಮುಕ್ತಿದನಾದ ಶ್ರೀ ಕೃಷ್ಣನ ಚರಣಗಳಲ್ಲಿ ಇದನ್ನೇ ಪ್ರಾರ್ಥಿಸಿರುವರು.

'ಸ್ಯಾನ್ನಃ ಪುನರ್ದರ್ಶನಂ' ಎಂದು ಸ್ವಾಮಿಗಭಿವಂದಿಸಿ ವಾದಿರಾಜರ ಅಪ್ಪಣೆಯನ್ನು ಪಡೆದು ಉಡುಪಿಯಿಂದ ಹೊರಟರು.

ಉಡುಪಿಯಿಂದ ಹೊರಟವರು ಧರ್ಮಸ್ಥಳ, ಸುಬ್ರಹ್ಮಣ್ಯ, ರಾಮೇಶ್ವರ, ಅನಂತಶಯನ ಮೊದಲಾದ ಕ್ಷೇತ್ರಗಳನ್ನು ಸಂದರ್ಶಿಸಿ ಮೈಸೂರು ದೇಶಕ್ಕೆ ಬಂದು ಮೇಲುಕೋಟೆಗೆ (ಯದುಗಿರಿಗೆ) ಬಂದು ಶ್ರೀ ಚೆಲ್ವ ನಾರಾಯಣನ ದರ್ಶನ ಮಾಡಿದರು.

ಮೇಲುಕೋಟೆಯಲ್ಲಿ ದಾಸರಿರುವಾಗ ಒಂದು ದಿನ ಸ್ವಪ್ನದಲ್ಲಿ ದಾಸರಿಗೆ ಭಸ್ಮ ರುದ್ರಾಕ್ಷಮಾಲಾಲಂಕೃತನಾದ ಬ್ರಾಹ್ಮಣನೋರ್ವನು ಕಾಣಿಸಿಕೊಂಡನು. ಆಗ ದಾಸರಿಗೆ ಮನುಷ್ಯ ದೇಹದ ಧರ್ಮದಂತೆ ದೇಹಾಲಸ್ಯದಿಂದಾಗಿ ಸ್ವಲ್ಪ ಜ್ವರ ಬರುತ್ತಿತ್ತು. ಸ್ವಪ್ನದಲ್ಲಿ ಕಾಣಿಸಿಕೊಂಡ ಬಾಹ್ಮಣನು 'ಇಲ್ಲೇಕೆ ಪರಿತಪಿಸುವೆ ನನ್ನಲ್ಲಿಗೆ ಬರಬಾರದೆ?' ಎಂದು ಮಾಯವಾದನು. ದಾಸರು ತಮಗೆ ಸ್ವಪ್ನದಲ್ಲಿ ಕಾಣಿಸಿಕೊಂಡ ಬ್ರಾಹ್ಮಣನ ಕುರುಹನ್ನು ಹೇಳಿ ಯಾರನ್ನು ಕೇಳಿದರೂ ಭಸ್ಮ ರುದ್ರಾಕ್ಷಮಾಲೆಗಳನ್ನು ಧರಿಸುವವರು ಆ ಊರಲ್ಲೇ ಇಲ್ಲವೆಂದು ತಿಳಿದುಬಂತು. ದಾಸರಿಗೆ ಧ್ಯಾನದಿಂದ ಇದು ನಂಜುಂಡೇಶ್ವರನ ಕರೆಯೆಂದು ತಿಳಿಯಿತು ಆಕ್ಷಣವೇ ಅಲ್ಲಿಂದ ಹೊರಟು ನಂಜನಗೂಡಿಗೆ ಬಂದು, ನಂಜುಡೇಶ್ವರನ ದರ್ಶನಮಾಡಿ ಕಂದುಗೊರಳ

ನನ್ನು **'ಮಹಾದೇವ ಸುಳಾದಿ'** ರೂಪ ಪದ್ಯದಿಂದ ತುತಿಸಿ ಜ್ವರಬಾಧೆ ಯಿಂದ ದೂರಾದರು.

ಇಂದಿಗೂ ಮಹಾದೇವಸುಳಾದಿಯನ್ನು ಹಾಡಿ ಅನೇಕರು ರೋಗ ಮುಕ್ತರಾಗುತ್ತಾರೆಂದು ಬಲ್ಲವರ ನಂಬಿಕೆಯಿದೆ.

ಅಲ್ಲಿಂದ ಹೊರಟವರು ಚೆನ್ನಪಟ್ನದ ಸಮೀಪವಿರುವ ಅಬ್ಬೂರಿಗೆ ಬಂದು ಪರಮಗುರುಗಳಾದ ಶ್ರೀ ಬ್ರಹ್ಮಣ್ಯ ತೀರ್ಥರ ದರ್ಶನಮಾಡಿ ಅಲ್ಲಿಂದ ಹೊರಟರು.

ಅಬ್ಬೂರಿಗೂ ಚೆನ್ನಪಟ್ನಕ್ಕೂ ನಡುವೆ ದಾಸರು ಒಂದು ಕಟ್ಟೆ ಯನ್ನು ಕಟ್ಟಿಸಿದರು. ಆ ಕಟ್ಟೆಯು 'ದಾಸನಕಟ್ಟೆ' 'ದಾಸಕಟ್ಟೆ' ಹೀಗೆ ಏನೇನೋ ರೂಪವನ್ನು ಹೊಂದಿ ಮೊನ್ನೆ ಮೊನ್ನೆ ತನಕ **'ಗೋಕಟ್ಟೆ'** ಎಂದಾದರೂ ಕರೆಸಿಕೊಳ್ಳುತ್ತಿತ್ತು. ದಾಸರ ಹೆಸರು ಆ ಕಟ್ಟೆಗೆ ಮಾಯ ವಾದರೂ ಚಿಂತಿಲ್ಲ. ಗೋವಿನ ಹೆಸರಾದರೂ ಇತ್ತು. ಈಗ ಆ ಕಟ್ಟೆಯು ಇದೆಯೋ ಇಲ್ಲವೋ, ಇದ್ದರೂ ಯಾವ ಹೆಸರಿನಿಂದ ಕರೆಸಿಕೊಳ್ಳುತ್ತಿರು ವುದೋ ದೇವರೇ ಬಲ್ಲ.

ದಕ್ಷಿಣಯಾತ್ರೆಯನ್ನು ಮುಗಿಸಿ ದಾಸರು ಪುನಃ ಹಂಪೆಗೆ ಬಂದರು. ಮತ್ತೆ ಸ್ವಲ್ಪಕಾಲದಲ್ಲಿ ಹಂಪೆಯಿಂದ ಹೊರಟು ಉತ್ತರ ದೇಶದ ಯಾತ್ರೆ ಯನ್ನು ಮುಗಿಸಿ ಬಂದರು.

ತೀರ್ಥಯಾತ್ರಾ ಕಾಲದಲ್ಲಿ ದಾಸರಿಂದಾದ ಮಹೋಪಕಾರವು ಚಿರ ಸ್ಮರಣೀಯವು.

## ವ್ಯಾಸರಾಯರು ಮತ್ತು ದಾಸರು

ತೀರ್ಥಯಾತ್ರೆಯನ್ನು ಮುಗಿಸಿ ಬಂದ ದಾಸರು ವ್ಯಾಸರಾಯರ ಬಳಿಗೆ ಬಂದರು. ಆಗ ವ್ಯಾಸರಾಯರೂ ಹಂಪೆಯಲ್ಲಿದ್ದರು. ವ್ಯಾಸರಾಯರೂ ದಾಸರೂ ತಮ್ಮ ವಾರ್ಧಿಕ್ಯದ ಹೆಚ್ಚಿನ ಕಾಲವನ್ನು ಜತೆಯಲ್ಲೇ ಕಳೆದು ದಾಗಿ ಕಂಡುಬರುವುದು. ಯಾತ್ರೆಯನ್ನು ಮುಗಿಸಿ ಬಂದ ದಾಸರು ಗುರು ಗಳಿಗೆ ವಂದಿಸಿ ವರದಿಯನ್ನೊಪ್ಪಿಸಲು ವ್ಯಾಸರಾಯರು—

**ರಾಗ ಸಾವೇರಿ ಮಟ್ಟೆ ತಾಳ**

ಕಂಗಳಿಗೆ ಹಬ್ಬವಾಯಿತಯ್ಯ ॥ ಪ ॥
ಮಂಗಳಾತ್ಮಕ ಪುರಂದರ ದಾಸರನು ಕಂಡು ॥ ಅ ॥ ಪ ॥
ಸಕಲ ತೀರ್ಥಕ್ಷೇತ್ರ ಯಾತ್ರೆ ಮಾಡಿದ ಫಲವು
ಸಕಲ ಸತ್ಕರ್ಮ ಸಾಧಿಸಿದ ಫಲವು ॥
ಭಕುತಿಯಿಂ ಭಾಗೀರಥೀ ಮಜ್ಜನದ ಫಲವು
ರುಕುಮಿಣಿ ಪತಿಯ ಪದ ಭಕುತರನು ಕಂಡು ॥ ೧ ॥
ಇವರ ನರರೆಂದವರು ನರಕದಲಿ ಬೀಳುವರು
ಕವಿ ಜನರು ಒಪ್ಪಿ ಕೈ ಹೊಡೆದು ಹೇಳಿರಲು ॥
ಅವನಿಯೊಳಗತಿ ದುರ್ಲಭವು ನಂದ ಗೋಪನ್ನ
ಕುವರ ನಿದ್ದೆಡೆಯೆ ವೈಕುಂಠವೆಂಬರ ಕಂಡು ॥ ೨ ॥
ಧನ್ಯನಾದೆನು ನಾನು ಮನುಜ ಜನ್ಮದಿ ಪುಟ್ಟಿ
ಮಾನ್ಯನಾದೆನು ಇನ್ನು ಈ ಜಗದೊಳು।
ಪನ್ನಂಗ ಶಯನ ಶ್ರೀ ಕೃಷ್ಣನ್ನ ದಾಸರನು
ಚೆನ್ನಾಗಿ ಸ್ಮರಿಸಿ ಪಾವನನಾದೆ ನಿಂದು ॥ ೩ ॥

ಎಂಬುದಾಗಿ ಹಾಡಿ ಪುರಂದರ ದಾಸರ ದರ್ಶನ ಸ್ಮರಣಾದಿಗಳೇ ಪರಮ ಭಾಗ್ಯವೆಂಬುದನ್ನು ಸೂಚಿಸಿರುವರು.

ವ್ಯಾಸರಾಯರು ಈ ಪ್ರಕಾರ ದಾಸರನ್ನು ಕೊಂಡಾಡಲು ವ್ಯಾಸ ರಾಯರ ಶಿಷ್ಯರಲ್ಲೊಬ್ಬರಾದ ಗೋವಿಂದ ಭಿಕ್ಷುಗಳೆಂಬವರು 'ಗುರುಗಳು ಶಿಷ್ಯರನ್ನು ಕೊಂಡಾಡಬಹುದೆ?' ಎಂಬುದಾಗಿ ತಿಳಿದುಕೊಳ್ಳಬೇಕೆಂಬ ಸದಿಚ್ಛೆಯಿಂದ ಪ್ರಶ್ನಿಸಲು ವ್ಯಾಸರಾಯರು—'ಈ ಜನ್ಮದಲ್ಲಿ ನಾವು ಅವರಿಗೆ ಗುರುಗಳೆನಿಸಿರುವೆವಾದರೂ ಪೂರ್ವದಲ್ಲಿ ನಮ್ಮ ಸ್ವರೂಪೋದ್ಧಾರಮಾಡಿದ ಗುರುಗಳೇ ಅವರು' ಎಂಬುದಾಗಿ ಹೇಳಿದರು. ವ್ಯಾಸರಾಯರೇ ಶ್ರೀ ಪ್ರಲ್ಹಾದ ಮಹಾರಾಜರು. ಪ್ರಲ್ಹಾದ ಮಹಾರಾಜರು ತಾಯಿಯ ಗರ್ಭದಲ್ಲಿರುವಾಗಲೇ ನಾರಾಯಣ ಮಂತ್ರ ಉಪದೇಶವಿತ್ತ ನಾರದರೇ

ಪುರಂದರ ದಾಸರು. ಆದಕಾರಣ ವ್ಯಾಸರಾಯರು ಹಾಗೆ ಹೇಳಿದರು. ಅಲ್ಲದೆ ಪ್ರತಿನಿತ್ಯದಲ್ಲಿ ವ್ಯಾಸರಾಯರು ಅರುಣೋದಯಾತ್ಪೂರ್ವ ದಲ್ಲಿ ದಾಸರ ಕುಟೀರದ ಬಳಿಗೆ ಹೋಗಿ. ದಂಡಧಾರಿಗಳಾಗಿ ಪ್ರದ ಕ್ಷಿಣೆ ಬರುತ್ತಿದ್ದರು; ಒಂದು ದಿನ ದಾಸರ ಮಕ್ಕಳು 'ವರದಪ್ಪನವರು' ಇದನ್ನು ಕಂಡಿರುವರೆಂದೂ, ಮತ್ತೊಂದು ದಿನ ದಾಸರ ಪತ್ನಿಯು ಕಂಡಿರು ವರೆಂದೂ ವರದಪ್ಪನವರು ಮಾಡಿದ ಮತ್ತು ಸರಸ್ವತೀ ಬಾಯಿಯವರು ಮಾಡಿದ ಇನ್ನಿತರ ಅಪರೋಕ್ಷಿಗಳು ಮಾಡಿದ ಅನೇಕ ದೇವರ ನಾಮು ಗಳಿಂದ ತಿಳಿದುಬರುವುದು ‡ 'ಹೇಳಬ್ಯಾಡಮ್ಮ ನೀನು ದಾಸರ ಕೂಡೆ' ಮೊದಲಾದ ಅನೇಕ ದೇವರ ನಾಮುಗಳೇ ದಿವ್ಯ ಕಥೆಗೆ ಸಾಕ್ಷಿ.

ದಾಸರ ಮಹಿಮೆಯನ್ನು ರಘುನಾಥಯತಿಗಳು ಹೇಳುತ್ತಾರೆ—

'ವರಧ್ರುವನ ಅವತಾರ ಶ್ರೀಪಾದ ರಾಜರು
ಸಿರಿರಂಗ ವಿಠಲನ ಉಪಾಸಕರು ||
ತರಳ ಪ್ರಲ್ಹಾದನವತಾರ ವ್ಯಾಸರಾಯರು
ಸಿರಿಕೃಷ್ಣನ ಉಪಾಸಕರು ||
ಹರಿಭಕ್ತ ನಾರದರವತಾರ ದಾಸರು
ಪುರಂದರ ವಿಠಲನ ಉಪಾಸಕರು ||
ಧರೆಯೊಳೀ ಮೂವರಿಗೆ ಸರಿಯಿಲ್ಲ-ಇವರ
ನರರೆಂದವರಿಗೆ ನರಕತಪ್ಪದು. ||'

ವ್ಯಾಸರಾಯರ 'ಕಂಗಳಿಗೆ ಹಬ್ಬವಾಯಿತಯ್ಯ' ಎಂಬ ಕೃತಿಯಲ್ಲಿನ 'ಇವರ ನರರೆಂದವರು ನರಕದಲಿ ಬೀಳುವರು' ಎಂಬ ಎರಡನೆಯ ನುಡಿಯ ಎರಡನೆ ಚರಣವನ್ನು ರಘುನಾಥಯತಿಗಳ ಕೃತಿಯಲ್ಲಿನ ಈ ಮೇಲೆ ಉದಾರಿಸಿದ ವಾಕ್ಯವನ್ನು ಕಂಡಾಗ ದಾಸರನ್ನು ಸಾಮಾನ್ಯ ಮನುಷ್ಯರೊಂದಿಗೆ ಸೇರಿಸುವುದು ಪ್ರಾಜ್ಞ ಸಮ್ಮತವಲ್ಲ. ದೇವಾಂಶಸಂಭೂ ತರಾದ ದಾಸರಾಯರ ದಿವ್ಯಯೋಗ್ಯತೆಯನ್ನು ಕರ್ಮಜದೇವತೆಗಳಾದ ವ್ಯಾಸರಾಯರಂಥವರಲ್ಲದೆ ಪಾಮರರೇನರಿವರು?

---

‡ ಗ್ರಂಥವಿಸ್ತಾರ ಭಯದಿಂದ ಈ ಸಂದರ್ಭದಲ್ಲಿ ಪದಗಳನ್ನು ಸಂಪೂರ್ಣ ಉದಾಹರಿಸಲಿಲ್ಲ.

## ದಾಸರ ಕರ್ತವ್ಯನಿಷ್ಠೆಯು

ವ್ಯಾಸರಾಯರೂ, ದಾಸರೂ, ಕನಕದಾಸರೂ ಪ್ರತಿನಿತ್ಯದಲ್ಲೂ ಹರಿಭಜನೆಯನ್ನು ಮಾಡುತ್ತಿದ್ದರು. ಮಠದಲ್ಲಿ ರಾತ್ರಿ ಪೂಜಾಕಾಲದಲ್ಲಿ ವ್ಯಾಸರಾಯರೂ, ದಾಸರೂ, ಕನಕದಾಸರೂ ಕೂಡಿಯೇ ಭಜನೆಮಾಡುತ್ತಿದ್ದರು. ಮೂವರೂ ಆನಂದದಿಂದ ಮೈಮರೆದು ದೇವರೆದುರು ಕುಣಿಯುತ್ತಿದ್ದರು. ವ್ಯಾಸರಾಯರ ಧರ್ಮೋಪದೇಶ—ಪುರಂದರದಾಸರ ಹರಿಕಥೆ, ಕುರುಬರಾದರೂ ಕನಕದಾಸರ ದೈವಭಕ್ತಿ—ಈ ಮೂವರೊಂದಾಗಿ ಮಾಡುತ್ತಿದ್ದ ಹರಿಭಜನ-ನರ್ತನ ಇವುಗಳಿಂದ ಜನರಲ್ಲಿ ವಿಶೇಷ ಧರ್ಮ ಜಾಗ್ರತಿಯುಂಟಾಯ್ತು.

ಏನಾದರೇನು ಕೇವಲ ಪಾಂಡಿತ್ಯಮದದಿಂದ ಕೊಬ್ಬಿದ ಗಜಪಂಡಿತಮಾನ್ಯರು ಮಾತ್ರ 'ನಾಯಕನ ಉಪದೇಶ! ಕುರುಬನ ಕುಣಿದಾಟ! ಈ ಚಿನಿವಾರ ಕುರುಬರಿಗೆ ಸಂಸ್ಥಾನದಲ್ಲಿ ಮಾನ್ಯತೆ, ಸ್ವಾಮಿಗಳು ಇಬ್ಬರನ್ನೂ ತಲೆಯಮೇಲೆ ಹೊತ್ತುಕೊಂಡಿದ್ದಾರೆ. ಇವರಿಗೆ ಹೇಳುವ ಶಕ್ತಿಯಾರಿಗಿದೆ? ಈ ದಾಸರುಗಳಿಂದಾಗುವ ಪ್ರಯೋಜನವೆಂದರೆ—

**ನಿರುದ್ಯೋಗೀ ಸಂಸ್ಥೆಯ ಉದ್ಧಾರ! ಅಶಾಸ್ತ್ರೀಯ ಪದ್ಧತಿಯ ಪ್ರಚಾರ ಸದಾಚಾರಪದ್ಧತಿಯ ಸಂಹಾರ! ಉಚ್ಚ ನೀಚ ಸ್ಥಾನಗಳ ವಿಚಾರವನ್ನು ಬಿಡಬೇಕು ಎಲ್ಲರೂ ಸರಿಸಮಾನರು ಎಂಬ ತಪ್ಪು ತಿಳುವಳಿಕೆಯನ್ನು ಜನಗಳಲ್ಲಿ ತುಂಬುವುದೇ ಇವರಿಂದಾಗುವ ಮಹೋಪಕಾರ!** ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡು ಬೆಳತನಕ ನಿಷ್ಪ್ರಯೋಜಕವಾಗಿ ಕುಣಿದು ಬೆವರು ಸುರಿಸಿದರೆ ಈ ಡೊಂಬರ ಕುಣಿತದಿಂದ ಯಾವ ಮಹಾಪುರುಷಾರ್ಥ ಸಾಧನೆಯೋ ಜಗದೀಶ್ವರನೇ ಬಲ್ಲ! ಒಟ್ಟಿನ ಮೇಲೆ ಶಾಸ್ತ್ರಕ್ಕೆ ಅಪಚಾರ! ಈ ಹುಚ್ಚು ಕುಣಿತಕ್ಕೆ ಯಾವ ಶಾಸ್ತ್ರಾಧಾರವೋ ಏನೋ! ಶಾಸ್ತ್ರ ವಾಕ್ಯಗಳಿಗೆ ಅಪಾರ್ಥ ಕಟ್ಟಿಕೊಂಡು ತಾವು ಮಾತ್ರ ಹಾಳಾಗುವುದಲ್ಲದೆ ಅನೇಕರನ್ನು ಕುಲಗೆಡಿಸುವ ಈ ಡೊಂಬಿ

ದಾಸರಿಗೆ ಸ್ವಾಮಿಗಳ ಪ್ರೋತ್ಸಾಹ, ಮಾತ್ರವಲ್ಲ ತಮ್ಮ ಪೀಠಗೌರವವನ್ನು ಮರೆತು ಈ ಬಡ ದಾಸಯ್ಯಗಳೊಂದಿಗೆ ಕುಣಿಯತೊಡಗಿದರೆಂದರೆ ಇದು ಕಲಿಪ್ರಾಬಲ್ಯವೇ ಸರಿ! ಹೂ ನಡೆಯಲಿ! ನಡೆಯಲಿ! ಎಂಬುದಾಗಿ ಗೊಣಗಿಕೊಳ್ಳುತ್ತಿದ್ದರು. ಈ ನಿಂದೆಯು ಸ್ವಾಮಿಗಳ ಮತ್ತು ದಾಸರೀರ್ವರ ಕಿವಿಯತನಕ ಮುಟ್ಟದೇ ಇರಲಿಲ್ಲ. ಆದರೆ ನಿಂದಕರ ನಿಂದೆಯಿಂದ ಕರ್ತವ್ಯ ಪಾಲನೆಯಲ್ಲಿ ಸಜ್ಜನರು ನಿರುತ್ಸಾಹಿಗಳಾಗರು. ನಿಂದಕರೂಬೇಕು. ಒಬ್ಬ ಕವಿಯು ನಿಂದಕರು ತಾಯಿಗಿಂತಲೂ ಹೆಚ್ಚಿನವರೆಂದಿದ್ದಾನೆ.-ಕಾರಣ 'ತಾಯಿಯು ಮಗುವಿನ ಮಲವನ್ನು ಕೈಯಿಂದ ತೆಗೆಯುವಳು. ನಿಂದಕರು ಬಾಯಿಂದಲೇ ತೆಗೆಯುವರು. ಅಂದ ಮೇಲೆ ತಾಯಿಗಿಂತಲೂ ನಿಂದಕರು ಉಪಕಾರಿಗಳಷ್ಟೇ?' ಎಂದು ಅವನ ಅಭಿಪ್ರಾಯ. ಶ್ರೀ ರಾಮದೇವರನ್ನೇ ಕ್ಷುಲ್ಲಕರಜಕನೋರ್ವನು ಬಾಯಿಗೆ ಬಂದಂತೆ ನಿಂದಿಸಿರುವನು; ಇನ್ನು ತಮ್ಮನ್ನು ನಿಂದಿಸಿದರೇನು ತಪ್ಪು, ನಿಂದಕರು ಬೇಕೇ ಬೇಕು ಎನ್ನುತ್ತಾರೆ ದಾಸರು.

**ಕಾಂಬೋಧಿ ರಾಗ ಅಟತಾಳ**

ನಿಂದಕರಿರಬೇಕು—ಇರಬೇಕು ॥ ಪ ॥
ನಿಂದಕರಿರಬೇಕು ಸಜ್ಜನರಿಗೆ
ಹಂದಿಯಿದ್ದರೆ ಕೇರಿಹ್ಯಾಂಗೆ ಶುದ್ಧವೊ ಹಾಂಗೆ ॥ ಅ ॥ ಪ ॥

ಅಂದಂದು ಮಾಡಿದ ಪಾಪವೆಂಬ ಮಲ
ತಿಂದು ಹೋಗುವರಯ್ಯ ಸಜ್ಜನರು ॥
ವಂದಿಸಿ ಸ್ತುತಿಸುವ ಜನರೆಲ್ಲರು ನಮ್ಮ
ಪೊಂದಿದ ಪುಣ್ಯವ ನೊಯ್ಯುವರಯ್ಯ ॥ ೧ ॥

ದುಷ್ಟ ಜನರು ಈ ಸೃಷ್ಟಿಯೊಳಿದ್ದರೆ
ಶಿಷ್ಟ ಜನರಿಗೆಲ್ಲ ಕೀರ್ತಿಗಳು ॥
ಇಷ್ಟಪ್ರದ ಶ್ರೀಕೃಷ್ಣ ನಿನ್ನೊಳು
ಇಷ್ಟೇ ವರವನ್ನು ಬೇಡುವೆನಯ್ಯ ॥ ೨ ॥

**ದುರುಳ ಜನಂಗಳು ಚಿರಕಾಲವಿರುವಂತೆ**
**ಕರವ ಮುಗಿದು ವರವ ಬೇಡುವೆನು ||**
**ಪರಿಪರಿ ತಮಸಿಗೆ ಗುರಿಯಾಗೋರಲ್ಲವೆ**
**ಪರಮ ದಯಾನಿಧೆ ಪುರಂದರ ವಿಠಲ || ೩ ||**

ಕತ್ತಲಿದ್ದರೆ ತಾನೇ ಬೆಳಕಿಗೆ ಬೆಲೆ? ಕಹಿಯಿದ್ದರೆ ತಾನೇ ಸಿಹಿಗೆ ಬೆಲೆ? ವಿಷವಿದ್ದರೆ ತಾನೇ ಅಮೃತಕ್ಕೆ ಪ್ರಾಶಸ್ತ್ಯ? ಆದುದರಿಂದ ನಿಂದಕರು ಬೇಕೇ ಬೇಕು. ಅಲ್ಲದೆ ಇಂಥವರಿಲ್ಲದಿದ್ದರೆ ಯಮ ಪಟ್ಟಣ ಬರಿದಾದರೆ ಯಮ ಧರ್ಮರಾಜನು ಭಗವತ್ಸೇವೆಯನ್ನು ಹೇಗೆ ಮಾಡಬೇಕು. ತ್ರಿವಿಧ ಜೀವರು ಯಾವ ಕಾಲದಲ್ಲೂ ಇರುತ್ತಾರೆ, ತಮ್ಮ ತಮ್ಮ ಸಾಧನೆಯನ್ನು ಮಾಡಿಕೊಳ್ಳುತ್ತಾರೆ. ಅಂಥವರ ತಿರಸ್ಕಾರದಿಂದಾಗಿ ನಾವು ಕರ್ತವ್ಯ ಚ್ಯುತರಾಗಬಾರದೆಂದೂ ಅಂಥವರನ್ನು ನಾವು ಆದರಿಸಲೂ ಬೇಕೆಂದು ದಾಸರು 'ಹಿಂದೆ ನಿಂದಿಸುವವನ ವಂದಿಸುತಲಿರಬೇಕು! ಕುಂದುಗಳನೆಣಿಸುವವನ ಪೂಜಿಸಲು ಬೇಕು' ಎಂದೂ ಒಂದು ಪದ್ಯದಲ್ಲಿ ಅಪ್ಪಣೆಕೊಡಿಸಿದ್ದಾರೆ.

**ತುಲ್ಯನಿಂದಾಸ್ತುತಿ ರ್ಮೌನೀ ಸಂತುಷ್ಟೋ ಯೇನಕೇನ ಚಿತ್**
**ಅನಿಕೇತಃಸ್ಥಿರಮತಿಃ ಭಕ್ತಿ ಮಾನ್ಮೇ ಪ್ರಿಯೋನರಃ || ಗೀತಾ । ೧೨ || ೧೯ ||**

**ತಾ||** (ಜನರು ತನ್ನನ್ನು ಸ್ತುತಿಸಿದರೆ ಸಂತೋಷವನ್ನೂ ನಿಂದಿಸಿದರೆ ದುಃಖವನ್ನು ಹೊಂದದೆ ಒಂದೇ ವಿಧವಾಗಿರುವವನೂ, ಹಾಳು ಹರಟೆಯನ್ನು ಮಾಡದೇ ಇರುವವನೂ, ಭಗವದ್ದತ್ತವಾದ ಯಾವ ಸ್ಥಿತಿಯಿಂದಲೂ ಯಾವ ವಿಕಾರವನ್ನು ಹೊಂದದವನನೂ ಶುಭನಿಕೇತನನಾದ ಭಗವಂತನನ್ನು ಆಶ್ರಯಿಸಿದವನೂ ಕುತರ್ಕಗಳಿಂದ ಕದಲದ ದೃಢವಾದ ಜ್ಞಾನ ಉಳ್ಳವನೂ, ಭಗವಂತನಲ್ಲಿ ಅಚಲಭಕ್ತಿಯುಳ್ಳವನೂ ಆದ ಮಾನವನು ನನಗೆ ಪ್ರೀತಿ ಪಾತ್ರನಾಗಿರುವನು) ಎಂಬುದಾಗಿ ಶ್ರೀಕೃಷ್ಣನು ಅರ್ಜುನನ್ನು ನಿಮಿತ್ತವಾಗಿರಿಸಿಕೊಂಡು ಲೋಕಕ್ಕೆ ಉಪದೇಶಿಸಿದ ಉಪದೇಶ ವಾಕ್ಯವನ್ನು ತಮ್ಮ ಆಚರಣೆಯಲ್ಲಿ ಪಾಲಿಸಿಕೊಂಡು ಬಂದ ಪುರಂದರ ದಾಸರು ಈ ನಿಂದಾಸ್ತುತಿಗಳಿಂದಾಗಿ ಕುಗ್ಗಿ ಹಿಗ್ಗಿಯಾರೇ? ತಾವು ಅಲ್ಲಲ್ಲಿ ಸಂಚಾರ ಮಾಡುತ್ತಾ ಶುದ್ಧವಾದ ಭಾಗವತ ಧರ್ಮ ಪ್ರಚಾರದಲ್ಲಿ ಸದಾ ನಿರತರಾಗಿ ಜನಗಳಲ್ಲಿ ಹರಿಭಕ್ತಿಯನ್ನು ವೃದ್ಧಿಗೊಳಿಸಿದರು. ಇಂದಿಗೂ ಮನೆ ಮನೆ

ಗಳಲ್ಲೂ ಹರಿಭಜನೆಯು ನಡೆಯುತ್ತಿದ್ದರೆ ಅದು ಕರ್ತವ್ಯನಿಷ್ಠರಾದ ಮಹಾ ಪ್ರಭಾವಾನ್ವಿತರಾದ ಶ್ರೀಪುರಂದರ ದಾಸರ ಉಪದೇಶ ವಾಕ್ಯಗಳ ಪ್ರಭಾವ ದ್ಯೋತಕಗಳಾದ ಸದಾಚಾರ ಪದ್ಧತಿಗಳು ಎಂಬುದನ್ನು ನಾವು ಮರೆಯ ಬಾರದು. ವ್ಯಾಸರಾಯರೂ ಸಾಮಾನ್ಯ ಜನರಲ್ಲೂ ಧರ್ಮಜಾಗ್ರತಿ ಯುಂಟಾಗಬೇಕೆಂಬ ತಮ್ಮ ಇಚ್ಛೆಯನ್ನು ದಾಸರು ನೆರವೇರಿಸಿದುದರಿಂದ ಕರ್ತವ್ಯನಿಷ್ಠರಾದ ದಾಸರಿಂದ, ಭಾಗವತಧರ್ಮ ಪ್ರಚಾರವಾಗಬೇಕೆಂದಿದ್ದ ತಮ್ಮ ಹೆಬ್ಬಯಕೆಯು ಕೈಗೂಡಿತೆಂದು ಅತ್ಯಂತ ಹರ್ಷಯುಕ್ತರಾದರು. ದಾಸರ ಯೋಗ್ಯತೆಯನ್ನು ವ್ಯಾಸರಾಯರು ತಿಳಿದವರು. ವ್ಯಾಸರಾಯರ ಅನುಗ್ರಹದ ಸಾಫಲ್ಯವನ್ನು ಪಡೆದವರು ದಾಸರಾಯರು.

## ಪುರಂದರ ದಾಸರ ಕೃತಿಗಳಿಗೆ ಉಪನಿಷತ್ತುಗಳೆಂಬ ಬಿರುದು

ವ್ಯಾಸರಾಯರು ಪಾಠಕಾಲದಲ್ಲಿ ವ್ಯಾಸಪೀಠದ ಮೇಲೆ ಪುರಂದರ ದಾಸರಿಂದ ರಚಿತವಾದ ಪದಗಳನ್ನು ಬರೆದವಹಿಗಳನ್ನು ಸರ್ವಮೂಲ ಗ್ರಂಥಗಳ ಜತೆಯಲ್ಲಿರಿಸಿಕೊಂಡು ಸಂದರ್ಭೋಚಿತವಾಗಿ ದಾಸರ ಪದಗ ಳನ್ನು ಉದಾಹರಿಸುತ್ತಲೂ ಸರ್ವಜ್ಞರ ಶಾಸ್ತ್ರಕ್ಕೂ ದಾಸರ ಪದಗಳಿಗೂ ಕಿಂಚಿತ್ತೂ ಅರ್ಥವ್ಯತ್ಯಾಸವಿಲ್ಲ, ದಾಸರ ಪದಗಳು ಸರ್ವಜ್ಞ ಶಾಸ್ತ್ರಾರ್ಥ ಸಾರಸಂಗ್ರಹಗಳು, ಎಂಬುದನ್ನು ತೋರಿಕೊಡುತ್ತಲೂ ಇರಲು, ಮತ್ಸರಿ ಗಳಾದ ಕೆಲಜನ ಪಂಡಿತರಿಗೆ ಇದು ಸಹನವಾಗದೆ ಆ ಚಿನಿವಾರನಪದ್ಯ ಗಳೆಲ್ಲಿ! ಸರ್ವಜ್ಞರ ಶಾಸ್ತ್ರವೆಲ್ಲಿ! ಇರುವೆಗೂ ಪರ್ವತಕ್ಕೂ ಇರುವಷ್ಟೂ ಹೋಲಿಕೆಯಿಲ್ಲದಿದ್ದರೂ ದಾಸರ ಮೇಲಿನ ಅಭಿಮಾನದಿಂದ ವ್ಯಾಸರಾ ಯರು ಸರ್ವಜ್ಞ ಶಾಸ್ತ್ರದತ್ತ ದಾಸರ ಪದಗಳನ್ನು ಎಳೆದೆಳೆದು ತಮ್ಮ ವಿದ್ವ ತ್ಬಲದಿಂದ ಸಮನ್ವಯಮಾಡಿ ತೋರಿಸುತ್ತಿರುವರು, ಎಂದಿಗೂ ಆ ಪದ ಗಳಿಗೆ ಎಳ್ಳಷ್ಟೂ ಆ ಯೋಗ್ಯತೆಯಿಲ್ಲ. ಒಂದು ವೇಳೆ ಯೋಗ್ಯತೆ ಇದ್ದ ಕೃತಿಗಳೇ ಆಗಿದ್ದರೂ ಸರ್ವಮೂಲ ಗ್ರಂಥದೊಂದಿಗೆ ಈ ಕನ್ನಡ ಪದಗಳ ವಹಿಯನ್ನಿಟ್ಟುಕೊಳ್ಳುವುದೆಂದರೇನು! ಇವನ್ನು ಉದಾಹರಿಸುವುದೆಂದ ರೇನು! ಇದು ಸತ್ಸಂಪ್ರದಾಯಕ್ಕೆ ವಿರೋಧವೆಂಬುವನ್ನು ಸ್ವಾಮಿಗಳು

ಅರಿಯದವರೇ! ಇದೆಂತಹ ಅಭಿಮಾನ! ದೊಡ್ಡವರಿಗೆ ಹೇಳುವವರಾರು!' ಎಂದು, ಏನೇನೋ ಗೊಣಗಿಕೊಂಡರು. ವ್ಯಾಸರಾಯರ ಕಿವಿಗೂ ಈ ಗೊಣಗಾಟವು ಬೀಳದಿರಲಿಲ್ಲ. ವ್ಯಾಸರಾಯರು ಅಂಥವರನ್ನು ಕುರಿತು— 'ಏನು ನಿಮ್ಮಗಳ ಮನಸ್ಸಿನ ಸಂದೇಹ!' ಎಂದು ಕೇಳಲು ಒಬ್ಬನು 'ಸರ್ವ ಮೂಲ ಗ್ರಂಥಗಳೊಂದಿಗೆ ಕನ್ನಡ ಪದಗಳ ವಹಿಯನ್ನಿಟ್ಟುಕೊಂಡು ಉದಾಹರಿಸುವುದು ಸಂಪ್ರದಾಯ ವಿರೋಧವಲ್ಲವೆ?' ಎಂದನು. ವ್ಯಾಸ ರಾಯರು 'ನಾವಿಡದಿದ್ದರೂ ಅವೇ ಬಂದು ಪೀಠವನ್ನು ಅಲಂಕರಿಸುವುವು' ಎಂದೊಡನೆ ಇನ್ನೊಬ್ಬನು 'ಕಿತ್ತೆಸೆದರೆ ತಾವೇ ಹಾರಿಹೋಗುವುವು' ಎಂದೇ ಬಿಟ್ಟನು. ಮಹಾನುಭಾವರಾದ ವ್ಯಾಸರಾಯರು ನಗುತ್ತಾ 'ಅದೂ ಆಗಿ ಹೋಗಲಿ' ಎಂದರು. ಒಬ್ಬ ನಿಷ್ಠುರಿಯು ಮೂರು ಮೂರು ಬಾರಿ ಕಿತ್ತೆಸೆದರೂ ದಾಸರ ಪದಗಳ ವಹಿಗಳು ತಾವಾಗಿಬಂದು ವ್ಯಾಸಪೀಠವನ್ನು ಅಲಂಕರಿಸಿದುವು. ಆಗ ವ್ಯಾಸರಾಯರು 'ಈಗೇನೆನ್ನುವಿರಿ' ಎನ್ನಲು ಕೆಲವರು ಅವಿವೇಕದಿಂದ ತಾವಾಡಿದುದು ಅಪರಾಧವಾಯ್ತೆಂದರು. ಕೆಲವರು ಇಷ್ಟಾದರೂ 'ಇಂದ್ರಜಾಲ'ವೆಂಬ ತಮ್ಮ ಮೂಲ ಮಂತ್ರವನ್ನು ಬಿಡಲಿಲ್ಲ. ಅದು ಅಂಥವರ ಹಣೆಯ ಬರಹ.

ದಾಸರ ಈ ಮಹಿಮೆಯನ್ನು ವರದಪ್ಪನವರು—

'ಪದಗಳು ಬರದ ವಹಿಗಳು ಮುಂಕೊಂಡು
ಮಧ್ವಶಾಸ್ತ್ರದ ವೇಲೆ ಕುಳಿತಿರಲದ ಕಂಡು
ಹದನವರಿಯದ ದಿಂಡೆಯನೊಬ್ಬನು
ಪದದ ವಹಿಯ ತೆಗೆದು ಬಿಸಾಟನಾಗ ||
ಎರಡಾವರ್ತಿ ಬಿಸಾಡಲಾಗ ಅದು
ತಿರುಗಿ ತಿರುಗಿ ಬಂದು ಮೇಲೆ ಕುಳ್ಳಿರಲು
ಗುರು ವ್ಯಾಸರಾಯರು ನೋಡಿ ಹರುಷದಿಂದ
**ಪುರಂದರ ಉಪನಿಷತ್ತೆಂದು ಕರೆದರು'**||

ಎಂಬುದಾಗಿ ಹಾಡಿರುವರು. ಅಲ್ಲದೇ ವ್ಯಾಸರಾಯರೇ ಮತ್ತೊಂದು

ಸಂದರ್ಭದಲ್ಲಿ ಪುರಂದರ ದಾಸರನ್ನು ಕೊಂಡಾಡುವಾಗ **'ಇವರಿಂದ ಮಾತು ಗಳು ವೇದಾರ್ಥಸಾರಗಳು'** ಎಂಬುದಾಗಿಯೂ ಕೊಂಡಾಡಿರುವರು.

ಮಹಾಭಾರತಕ್ಕೆ ಮಾತ್ರ 'ಪಂಚಮೋ ವೇದಃ' ಐದನೇ ವೇದವೆಂಬ ಪ್ರಶಸ್ತಿಯಿದೆ. ಭಗವದ್ಗೀತೆಗೆ ಮಾತ್ರ 'ಉಪನಿಷತ್' ಉಪನಿಷತ್ತು ಎಂಬ ಬಿರುದಿದೆ. ದಾಸರ ಪದಗಳಿಗೆ ವೇದಾರ್ಥಸಾರಗಳೆಂಬ ಪ್ರಶಸ್ತಿಯನ್ನೂ, ಉಪನಿಷತ್ತೆಂಬ ಬಿರುದನ್ನೂ, ಚಂದ್ರಿಕಾ, ತರ್ಕತಾಂಡವ, ನ್ಯಾಯಾಮೃತಾದಿ ಉದ್ಗ್ರಂಥಗಳನ್ನು ರಚಿಸಿ ದ್ವೈತ ಶಾಸ್ತ್ರದಲ್ಲೇ ಉದ್ಗ್ರಂಥಗಳು 'ವ್ಯಾಸತ್ರಯ'ಗಳೆಂದು ವಿದ್ವನ್ಮಣಿಗಳಿಂದಲೂ, ಸಕಲ ಶಾಸ್ತ್ರಜ್ಞರಿಂದಲೂ, ಅಭಿನಂದನೆಯನ್ನು ಪಡೆದ ಮಹಾ ಗ್ರಂಥಗಳ ಕರ್ತರೂ, ದ್ವೈತಮತದ ಧ್ವಜವನ್ನೆತ್ತಿ ಹಿಡಿದವರೂ ಆದ ವ್ಯಾಸರಾಯರಿಂದಲೇ ದಾಸರ ಪದಗಳಿಗೆ ಈ ಗೌರವಗಳು ಸಂದಿರಲು ಪ್ರಾಜ್ಞರು ಪುರಂದರ ದಾಸರ ಪದಗಳ ಮಹತ್ವ ವೆಷ್ಟೆಂಬುದನ್ನು ತಿಳಿಯಬಹುದು. ಯಾರೋ ಅರಿಯದವನೊಬ್ಬನು **'ದಾಸರ ಪದಕ್ಕೆ ಅರ್ಥವಿಲ್ಲ, ತಂಗಡಿಹೂವಿಗೆ ವಾಸನೆಯಿಲ್ಲ'** ಎಂಬ ಗಾದೆಯೊಂದನ್ನು ಮಾಡಿರುವನು. ಗಾದೆ ಎಂಬುದು ವೇದಕ್ಕೆಸಮ ಎಂಬ ನಾಣ್ಣುಡಿ ಇದ್ದರೂ ಪುರಂದರಾದಿ ಅಪರೋಕ್ಷಿಗಳ ಕೃತಿಗಳಿಗೆ ಈ ಗಾದೆಯನ್ನು ಅನ್ವಯಿಸಲಾಗದು. ಒಂದು ವೇಳೆ ಗಾದೆಗೆ ಬೆಲೆಕೊಡಲೇಬೇಕೆಂದಾದರೆ ಶಂಕದಾಸರ ಪದಗಳಿಗೆ ಈ ಗಾದೆಯನ್ನು ಅನ್ವಯಿಸಿಕೊಂಡರೆ ತಪ್ಪಾಗಲಿಕ್ಕಿಲ್ಲ. **'ಸುಧಾ ಓದಿ ಪದಹೇಳು'** ಎಂಬ ಮಾತು ಬಹು ಹಿಂದಿನಿಂದ ರೂಢಿಯಲ್ಲಿರುವುದನ್ನು ನೋಡಿದರೆ ಸರ್ವಜ್ಞರ ಶಾಸ್ತ್ರಾರ್ಥ ಪ್ರತಿಪಾದಕಗಳಾದ ಸುಧಾದಿಗ್ರಂಥಗಳನ್ನೋದಿ ಕರ್ಣಾಟಕ ಹರಿದಾಸ ಪಂಥದ ಸಂಪ್ರದಾಯಾಭಿಜ್ಞರೂ ಆಗಿದ್ದವರುಮಾತ್ರ ಪುರಂದರಾದಿ ಅಪರೋಕ್ಷಿಗಳ ಪದಗಳ ಅರ್ಥವನ್ನು ಗ್ರಹಿಸಲುಸಮರ್ಥರೇ ಹೊರತು ಇತರರು ಮೇಲು ಮೇಲಿನ ಅರ್ಥವನ್ನು ಮಾತ್ರಗ್ರಹಿಸಿಕೊಳ್ಳಲು ಸಮರ್ಥರಾಗಿಯಾರು. **ಪುರಂದರೋಪನಿಷತ್** ಎಂಬಮಾತನ್ನು ಮಾತ್ರ ದಾಸರ ಪದಗಳನ್ನು ಅಭ್ಯಸಿಸುವರಾರೂ ಮರೆಯಬಾರದು.

## ಪರದೆಗೆ ಹತ್ತಿದ ಉರಿ ಆರಿಸಿದರು.

ಒಮ್ಮೆ ವ್ಯಾಸರಾಯರು ತುಂಬಿದ ಸಭೆಯಲ್ಲಿ ವೇದಾಂತದ ವಿಷಯದಲ್ಲಿ ಉಪನ್ಯಾಸ ಮಾಡುತ್ತಿರಲು ದಾಸರ ಕಡೆಗೆ ತಮ್ಮ ದೃಷ್ಟಿಯನ್ನು ಹೊರಳಿಸಿದಾಗ ದಾಸರು ಅಂಗವಸ್ತ್ರವನ್ನು ಏಕೋ ಗಸಗಸನೆ ತಿಕ್ಕಿದುದನ್ನು ಕಂಡರು 'ಏನು ದಾಸರೇ! ಅಂಗವಸ್ತ್ರವನ್ನೇಕೆ ತಿಕ್ಕಿದಿರಿ?' ಎಂದು ಕೇಳಲು ದಾಸರು 'ವಿಜಯ ವಿಠಲ ದೇವರ ಗುಡಿಯಲ್ಲಿ ದೇವರ ಮುಂದಿನ ತೆರೆ ಮರೆಗೆ ಅಕಸ್ಮಾತ್ ಬೆಂಕಿಯು ಹತ್ತಿತು. ಅದನ್ನು ಆರಿಸಬೇಕಾಯ್ತು' ಎಂದರು. ಆಗ ಮಠದ ದಿಂಡೆಯನೊಬ್ಬನು 'ಈಗ ಆರಿರಬಹುದು!' ಎಂದು ಅಪಹಾಸ್ಯ ಮಾಡಿದನು. ವ್ಯಾಸರಾಯರು 'ನೀನೇ ಹೋಗಿ ನೋಡಿದರೆ ಆರಿದೆಯೋ ಇಲ್ಲವೋ ಎಂಬುದು ತಿಳಿಯುವುದು' ಎಂದರು. ಅಷ್ಟರಲ್ಲೇ ಗುಡಿಯಿಂದೊಬ್ಬನು ಓಡೋಡುತ್ತಾ ಬಂದು 'ವಿಜಯ ವಿಠಲ ದೇವರ ಗುಡಿಯಲ್ಲಿ ಪರದೆಗೆ ಉರಿ ಹತ್ತಿತ್ತು ದಾಸರು ಬಂದು ಆರಿಸಿದರು' ಎಂದು ವಿಜ್ಞಾಪಿಸಲು ಶ್ರೀಗಳವರು 'ಈಗ ದಾಸರೆಲ್ಲಿರುವರು?' ಎಂದು ಕೇಳಲು ಬಂದವನು ಸ್ವಾಮಿಗಳಿಗೆ ಈ ವಿಚಾರವನ್ನು ತಿಳಿಸಬೇಕೆಂಬ ಆತುರದಲ್ಲಿ ಬಂದವನಾದುದರಿಂದ ಅಲ್ಲೇ ಇದ್ದ ದಾಸರನ್ನು ಕಂಡಿರಲಿಲ್ಲ. ಹೀಗಾಗಿ 'ಇನ್ನೂ ಗುಡಿಯಲ್ಲೇ ಇರುವರು' ಎಂದನು. ವ್ಯಾಸರಾಯರು ದಾಸರಕಡೆಗೆ ಕೈತೋರಿಸಿ 'ಇಲ್ಲಿರುವವರ್ಯಾರೋ?' ಎಂದಾಕ್ಷಣ ಓಡುತ್ತ ಬಂದಿದ್ದವನು ದಾಸರನ್ನು ನೋಡಿ ಆಶ್ಚರ್ಯದಿಂದ 'ದಾಸರಮಹಿಮೆ ನಾನೇನು ಬಲ್ಲೆ ಮಹಾಸ್ವಾಮಿ!' ಎಂದನು. ವ್ಯಾಸರಾಯರು ದಿಂಡೆಯನತ್ತ ನೋಡಿದರು. ದಿಂಡೆಯನ ಮುಖ ಹಿಂಡಿ ಹಿಪ್ಪೆಯಾದಂತಿತ್ತು.

ದಾಸರ ಈ ಮಹಿಮೆಯನ್ನು ವರದಪ್ಪನವರು

'ಗುರುರಾಯರು ದಾಸರ ನೋಡುತಿರಲಾಗ
ಅರಿವೆಯ ನೊರೆಸಲು ಕರದಿಂದ ಬೇಗ ।
ಕರೆದು ಕೇಳಲು ಸಿರಿ ವಿಠಲನ ಗುಡಿಯಲ್ಲಿ
ಪರದೆಗೆ ಹತ್ತಿದ ಉರಿ ಆರಿಸಿದೆನೆಂದರು'॥

ಎಂಬುದಾಗಿ ಹಾಡಿರುವರು.

## ಹಂಪೆಯಲ್ಲಿ ಮಂಟಪ

ಕೃಷ್ಣದೇವರಾಯನಿಗೆ ಕುಹಯೋಗ ಒದಗಿದಾಗ ಶ್ರೀ ವ್ಯಾಸರಾಯರು ತಮ್ಮ ತಪಃಪ್ರಭಾವದಿಂದ ಪರಿಹರಿಸಿದರು. ರಾಯನು ಆ ಕಾಲದಲ್ಲಿ ಶ್ರೀ ವ್ಯಾಸರಾಯರ ಸಂಸ್ಥಾನಕ್ಕೆ ಅನೇಕ ಭೂಮಿಕಾಣಿಗಳನ್ನು ಧಾರೆಯೆರೆದುಕೊಟ್ಟು ಗೋ ಭೂ ಹಿರಣ್ಯಾದಿ ದಾನಗಳಿಂದಲೂ ಅನ್ನ ದಾನದಿಂದಲೂ ಎಲ್ಲರನ್ನು ತೃಪ್ತಿಪಡಿಸಿ ತನ್ನೀವಿಪತ್ತು ಪರಿಹಾರವಾದ ಕಾಲದಲ್ಲಿ ದಾಸರು ತನ್ನಿಂದೇನಾದರೂ ಸೇವೆಯನ್ನು ಸ್ವೀಕರಿಸಲೇ ಬೇಕು. ಇಲ್ಲವಾದರೆ ತನಗೆ ಎಳ್ಳಷ್ಟೂ ಮನಸ್ಸಿಗೆ ತೃಪ್ತಿಯಾಗದೆಂದು ಬಲುವಾಗಿ ಪ್ರಾರ್ಥಿಸಿಕೊಳ್ಳಲು ತಮಗೆ ನಿತ್ಯಾಹ್ನೀಕಕ್ಕೆ ಉಪಯೋಗವಾಗುವಂತೆಯೂ ಅದರಿಂದ ಹಲವರಿಗೆ ಉಪಕಾರವಾಗುವಂತೆಯೂ ತುಂಗಭದ್ರಾತೀರದಲ್ಲಿ ರಾಯನಿಂದ ಒಂದು ಮಂಟಪವನ್ನು ಕಟ್ಟಿಸಿಕೊಂಡರು. ಇದಕ್ಕೂ **'ದಾಸರ ಮಂಟಪ'**ವೆಂದೇ ಹೇಳುತ್ತಾರೆ. ಮಹಾತ್ಮರು ತಮಗಾಗಿ ಏನನ್ನೂ ಬಯಸರು. ತಮ್ಮ ಪ್ರತಿಯೊಂದು ಕಾರ್ಯದಿಂದಲೂ, ತಾವು ಹೊಂದುವ ಪ್ರಯೋಜನದಿಂದಲೂ ಬಹುಜನ ಸಜ್ಜನರಿಗೆ ಉಪಯೋಗವಾಗಬೇಕೆಂಬುದೇ ಅವರ ಗುರಿ.

## ಇನ್ನನೇಕ ಮಹಿಮೆಗಳು

ಪರಮಾತ್ಮನು ದಾಸರಿಗೆ ಮತ್ತೊಮ್ಮೆ ಸಂಪತ್ತನ್ನಿತ್ತನಂತೆ. ದಾಸರು ಅದನ್ನೆಲ್ಲ ಸತ್ಪಾತ್ರರಿಗೆ ದಾನಮಾಡಿದರಂತೆ.

ದಾಸರ ಮನೆಗೆ ಅನೇಕರು ಬಂದು ದಾಸರ ಪಾದಧೂಳಿಯನ್ನು ಕಣ್ಣಿಗೊತ್ತಿಕೊಂಡು ರೋಗಗಳಿಂದ ಮುಕ್ತರಾಗಿ ಹೋಗುತ್ತಿದ್ದರಂತೆ.

ಸಾವಿರಾರು ಮಂದಿ ಒಂದೇ ದಿನ ಹೇಳದೆಕೇಳದೇ ದಾಸರ ಮನೆಗೆ ಭೋಜನಕ್ಕೆ ಬಂದರಂತೆ. ಅಂದು ಇಂದ್ರಾದಿದೇವತೆಗಳು ಬಂದು ಪಾಕಕರ್ತರರೂಪದಿಂದ ಸಕಲಸಿದ್ಧತೆಗಳನ್ನು ತಾವೇಮಾಡಿಕೊಂಡು ಬಂದವರಿಗೆ ಭೋಜನಮಾಡಿಸಿ ಕಳುಹಿಸಿದರಂತೆ.

**'ಉಕ್ಕುವ ತುಪ್ಪಕ್ಕೆ ಕೈಯನಿಕ್ಕುವೆ ರಕ್ಕಸಾಂತಕ ವಿಷ್ಣು ಸರ್ವೋತ್ತಮನೆಂದು'** ಎಂಬ ವ್ಯಾಸರಾಯರಿಂದ ರಚಿತವಾದೀ ದೇವರ ನಾಮವನ್ನು ಪುರಂದರ ದಾಸರು ನಿತ್ಯದಲ್ಲೂ ಗೋಪಾಳಕ್ಕೆ ಹೋಗುವಾಗ ಹಾಡಿಕೊಂಡು ಹೋಗುತ್ತಿದ್ದರಂತೆ. ಕೆಲವರು ಕುಹಕಿಗಳು ದಾಸರನ್ನು ಕರೆದೊಯ್ದು ಕಾಯಿಸಲಿಕ್ಕಿಟ್ಟ ಬೆಣ್ಣೆಯಲ್ಲಿ ಕೈಯಿಕ್ಕ ಹೇಳಲು ದಾಸರು ಕೈಯ್ಯಿಕ್ಕಿದರಂತೆ. ಕರೆದೊಯ್ದವರ ಕೈ ಸುಟ್ಟುಹೋಗಿ ದಾಸರಲ್ಲಿ ಕ್ಷಮಾ ಯಾಚನೆಯನ್ನು ಮಾಡಿದರಂತೆ.

ಹೀಗೆ ಅನೇಕ ಮಹಿಮೆಗಳಿವೆ.

## ಮಧ್ವಪತಿಗೆ ಆಜ್ಞೆ

ಪುರಂದರ ದಾಸರು ಪಂಚಲಕ್ಷ ಪದಗಳನ್ನು ಮಾಡಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ನಾಮಕ ಪಂಚ ಭಗವದ್ರೂಪಗಳಿಗೆ ಒಂದೊಂದುರೂಪಕ್ಕೆ ಒಂದೊಂದು ಲಕ್ಷಪದಗಳನ್ನು ಅರ್ಪಿಸುವ ಸಂಕಲ್ಪ ಮಾಡಿದ್ದರು. ಆದರೆ ಭಗವತ್ಸಂಕಲ್ಪದಂತೆ ತಮ್ಮ ಅವತಾರ ಪರಿಸಮಾಪ್ತಿಯ ಕಾಲವು ಸಮೀಪಿಸಿದುದನ್ನರಿತರು. ಆಗ ನಾಲ್ಕು ಮುಕ್ಕಾಲು ಲಕ್ಷ ಪದಗಳನ್ನು ಮಾಡಿದ್ದರಷ್ಟೆ. ಆದರೂ ಭಗವಂತನ ಚಿತ್ತಕ್ಕೆ ವಿರೋಧವಾಗಿ ನಡೆಯುವ ಯತ್ನವನ್ನು ಮಾಡದೆ ಮಧ್ವಪತಿಯ ನ್ನೊಂದು ದಿನ ಶ್ರೀ ವಿಜಯವಿಠಲ ದೇವರಗುಡಿಗೆ ತಮ್ಮ ಸಂಗಡ ಕರೆ ದೊಯ್ದು ತಮ್ಮ ಸಂಕಲ್ಪವಿದ್ದುದನ್ನು ತಿಳಿಸಿ ಪಂಚಲಕ್ಷವು ಪೂರ್ತಿ ಯಾಗದೆ ನಾಲ್ಕು ಮುಕ್ಕಾಲು ಲಕ್ಷವಾಗಿರುವದನ್ನು ತಿಳಿಸಿ ಉಳಿದ ಅಂಶ ವನ್ನು ಪೂರ್ಣಮಾಡೆಂದು ಆಜ್ಞೆಯಿತ್ತರು. ಮಧ್ವಪತಿಯು ಈ ಜನ್ಮದಲ್ಲಿ ತನ್ನಿಂದ ಸಾಧ್ಯವೇ ಎಂದು ಕೇಳಲು, ಮುಂದಿನ ಜನ್ಮದಲ್ಲಿ ಶ್ರೀ ವಿಜಯ ವಿಠ್ಠಲನು ಪೂರ್ಣ ಮಾಡಿಸುವನು ಎಂದು ಹರಸಿದರಂತೆ. ಮಧ್ವಪತಿಯೇ ಮುಂದಿನ ಜನ್ಮದಲ್ಲಿ ಶ್ರೀ ಪುರಂದರ ದಾಸರ ಪ್ರೀತಿಪಾತ್ರರಾದ ಶ್ರೀವಿಜಯ ದಾಸರಾಗಿ ಅವತರಿಸಿ ಪುರಂದರ ದಾಸರ ಆಜ್ಞೆಯಂತೆ ಪದಗಳನ್ನು ರಚಿಸಿ ಶ್ರೀ ವಿಜಯ ವಿಠ್ಠಲನಿಗೆ ಅರ್ಪಿಸಿದನೆಂದು ಅಪರೋಕ್ಷಿಗಳ ಕೃತಿಗಳಿಂದ ತಿಳಿದು ಬರುವುದು.

# ದಾಸರೆಂದರೆ ಪುರಂದರ ದಾಸರಯ್ಯ

ಶ್ರೀಮನ್ಮಧ್ವಾಚಾರ್ಯರು ಪ್ರಚುರಪಡಿಸಿದ ಶುದ್ಧವಾದ ಭಾಗವತ ಧರ್ಮವನ್ನು ತಿಳಿಗನ್ನಡದಲ್ಲಿ ಗದ್ಯಪದ್ಯರೂಪಗಳಲ್ಲಿ ಪ್ರಚುರಪಡಿಸಿ ಶ್ರೀ ಮನ್ಮಧ್ವಮತದ ಮುಖ್ಯ ಪ್ರಮೇಯವಾದ ವಿಷ್ಣು ಸರ್ವೋತ್ತಮತ್ವ ಜ್ಞಾನ ಸಹಿತವಾದ ತಾರತಮ್ಯ ಜ್ಞಾನವನ್ನು ಆಬಾಲವೃದ್ಧ ಸ್ತ್ರೀ ಪುರುಷರಲ್ಲೂ ಸಕಲ ಜಾತಿಯವರಲ್ಲೂ—ಸುಜೀವಿಗಳಾದವರು ಕಲಿಪ್ರಾಬಲ್ಯದಿಂದ ತಮ್ಮನ್ನು ಮುಸುಕಿದ ಅಜ್ಞಾನದ ಪರದೆಯನ್ನು ಹರಿದೊಗೆದು ಶಾಸ್ತ್ರವಿಹಿತವಾದ ಈ ವಿಷ್ಣುಭಕ್ತಿ ಮಾರ್ಗವನ್ನು ಅನುಸರಿಸಿ ವಿಷ್ಣುವಿನ ಪರಮ ಪ್ರಸಾದರೂಪವಾದ ಮೋಕ್ಷವನ್ನು ಹೊಂದುವ ಸಾಧನ ಮಾರ್ಗವನ್ನು ಸುಲಭೋಪಾಯದಲ್ಲಿ ಬಳಕೆಗೆ ತಂದು ಶ್ರೀಹರಿ ಗುರುಗಳ ವಿಶೇಷಾನುಗ್ರಹಕ್ಕೆ ಪಾತ್ರವಾಗಿ ಎಲ್ಲರಿಗೂ ತತ್ರಾಪಿ ಕನ್ನಡಿಗರಿಗೆ ಪರಮೋಪಕಾರವನ್ನು ಮಾಡಿದ **'ಭಕ್ತ ಪುರಂದರದಾಸರು'** ಎಲ್ಲರಿಂದಲೂ ವಿಶೇಷತಃ ಕನ್ನಡಿಗರಿಂದಲೂ ತತ್ರಾಪಿ ಮಾಧ್ವರಿಂದಂತೂ ಚಿರಸ್ಮರಣೀಯರು.

ಕರ್ಣಾಟಕ ಹರಿದಾಸಪಂಥದಲ್ಲಿ ಯಾರು ಎಷ್ಟೇ ಕೆಲಸವನ್ನು ಮಾಡಿದ್ದರೂ ಆ ಕೀರ್ತಿಯು ಮುಖ್ಯವಾಗಿ ಶ್ರೀ ಪುರಂದರದಾಸರಿಗೆ ಮೀಸಲಾಗಿದೆ.

ದಾಸರು ಎಂದೊಡನೆ ಎಲ್ಲ ಕನ್ನಡಿಗರ ಸ್ಮೃತಿಪಥದಲ್ಲಿ ಪ್ರಥಮತಃ ಗೋಚರಿಸುವವರು ಪುರಂದರದಾಸರು.

ಕರ್ಣಾಟಕ ಹರಿದಾಸ ಸಾಹಿತ್ಯದಲ್ಲಿ ಪುರಂದರದಾಸರ ಸಾಹಿತ್ಯದಷ್ಟು ವ್ಯಾಪಕವಾದುದು ಮತ್ತು ಗ್ರಂಥಪ್ರಮಾಣದಿಂದಲೂ ದೊಡ್ಡದಾದುದು ಇನ್ನೊಂದಿಲ್ಲ.

ಪುರಂದರಂದರದಾಸರ ಒಂದು ಪದದ ಒಂದು ನುಡಿ–ಬೇಡ ಒಂದು ಚರಣವನ್ನರಿಯದವರು ಭಾರತದಲ್ಲಿಲ್ಲ. ಕನ್ನಡಿಗರಲ್ಲಂತು ಇಲ್ಲವೇ ಇಲ್ಲವೆಂಬುದು ನಿರ್ವಿವಾದ.

ಹರಿಯನುಗ್ರಹ ಪ್ರಭಾವದಿಂದ ತಮ್ಮ ಉಪದೇಶ ವಾಕ್ಯಗಳು ಜನಗಳಲ್ಲಿ ಪರಿಣಾಮಕಾರಿಯಾಗುವಂತೆ ಮಾಡಿ ಜನಗಳಲ್ಲಿ ಧರ್ಮ, ಸತ್ಯ, ಭೂತದಯೆ, ಸದಾಚಾರ, ಎಲ್ಲಕ್ಕಿಂತಲೂ ಮುಖ್ಯವಾಗಿ ಹರಿಭಕ್ತಿಯನ್ನು ವೃದ್ಧಿಗೊಳಿಸಿದ ಹರಿದಾಸರೆಲ್ಲರಿಗೂ ಮುಖ್ಯರು ಶ್ರೀ ಪುರಂದರದಾಸರು.

ಭಾಗವತದಲ್ಲಿ ಉಕ್ತವಾದ ಹರಿಕೀರ್ತನ ಪದ್ಧತಿಯು ಕಲಿಯುಗದಲ್ಲಿ ಮರೆಯಾಗುತ್ತಿರಲು ಪುನಃ ಪ್ರಕಾಶಕ್ಕೆ ತಂದು ಹರಿಕೀರ್ತನ ಪದ್ಧತಿಯನ್ನು ನಮ್ಮ ದೇಶದಾದ್ಯಂತ ಹರಡಿದವರು ಶ್ರೀ ಪುರಂದರದಾಸರು.

ಇಂದಿಗೂ ಮಠಗಳಲ್ಲೂ ಮನೆಮನೆಗಳಲ್ಲೂ ಹರಿಭಜನೆಯು ಎಲ್ಲಿ ನಡೆಯುತ್ತಿದ್ದರೂ ಅವು ನಮ್ಮ ಪುರಂದರ ದಾಸರ ಪ್ರಭಾವದ್ಯೋತಕಗಳಾದ ಸುಸನ್ನಿವೇಶಗಳು.

ಮುಖ್ಯವಾಗಿ ಕಲಿಯುಗದಲ್ಲಿ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಲು ಸುಲಭವಾದ ಮಾರ್ಗವೆಂದರೆ **ಹರಿನಾಮ ಸ್ಮರಣೆಯು** ಎಂಬುದನ್ನು ಸರ್ವತ್ರ ಪ್ರಚುರಪಡಿಸಿ ತಮ್ಮ ಪ್ರಚಾರವನ್ನು ಸಂಪೂರ್ಣ ಫಲಕಾರಿಯನ್ನಾಗಿ ಮಾಡಿಕೊಂಡವರು ಪುರಂದರದಾಸರು.

ಲಕ್ಷಣ ಗೀತೆಯನ್ನು ಬರೆದು ಕರ್ಣಾಟಕೀ ಸಂಗೀತ ಶಾಸ್ತ್ರದ ಪುನರುದ್ಧಾರ ಕರ್ತರೂ ಶ್ರೀ ಪುರಂದರದಾಸರು. ಈ ವಿಷಯದಲ್ಲಿ

Purandara Dasa rescued our musical culture from decadence.

'He also brought a new method of teaching music to the musical world of South India acordingly, he was called "Pitamaha" (father) of Carnatic music' §

---

§ "Purandara Dasa–Father of Carnatic Music"–by Tara Iyer The Sunday Standard August 26,1956,Page 11

ಪ್ರಸಿದ್ಧ ಲೇಖಕರಾದ ಶ್ರೀಯುತ ತಾರಾ ಅಯ್ಯರವರು ತಮ್ಮ ಇತ್ತೀಚಿನ ಒಂದು ಲೇಖನದಲ್ಲಿ ಹೀಗೆ ಹೇಳಿದ್ದಾರೆ.

ಶ್ರೀ ಪುರಂದರ ದಾಸರು ಸಂಗೀತ ಶಾಸ್ತ್ರಜ್ಞರಾದವರಿಂದಲೂ ನಿತ್ಯ ಸ್ಮರಣೀಯರು

ಮಹಾರಾಷ್ಟ್ರ ಸಾಧು ಸಂತರುಗಳಿಗೂ ಮಾರ್ಗದರ್ಶಕರು ಶ್ರೀ ಪುರಂದರ ದಾಸರೇ ಎಂಬುದು ಚರಿತ್ರೆಯಿಂದ ತಿಳಿದು ಬರುವುದು. ಅವರೂ ಪುರಂದರ ದಾಸರಿಗೆ ಋಣಿಗಳೇ.

ಸರ್ವತೋಮುಖದಿಂದ ಶ್ರೀ ಪುರಂದರ ದಾಸರಿಂದಾದ ಮಹೋಪಕಾರವನ್ನು ದೈವಭಕ್ತರೂ ದೇಶ ಕಲ್ಯಾಣೇಚ್ಛುಗಳೂ ಯಾರೂ ಮರೆಯುವಂತಿಲ್ಲ.

ಕರ್ಣಾಟಕ ಹರಿದಾಸ ಪದ್ಧತಿಯು ಇಂದಿಗೂ ಕಿಂಚಿತ್ತಾದರೂ ತನ್ನ ಕಾರ್ಯಕ್ಷೇತ್ರದಲ್ಲಿ ಯಶಸ್ಸನ್ನು ಗಳಿಸುತ್ತಿರುವುದಾದರೆ ಶ್ರೀ ಪುರಂದರ ದಾಸರ ಪರಮಾನುಗ್ರಹದಿಂದಲ್ಲದೆ ಬೇರೆಯಲ್ಲ. ದಾಸರೆಂದರೆ ಶ್ರೀ ಪುರಂದರ ದಾಸರೇ. ಬೇರೆಯವರು ಅವರ ಹೆಸರು ಹೇಳಿದರೇನೇ ದಾಸರು. ಶ್ರೀ ವ್ಯಾಸರಾಯರು ಅಪ್ಪಣೆ ಕೊಡಿಸಿದ್ದಾರೆ—

**ರಾಗ ಕಲ್ಯಾಣಿ ಝಂಪೆ ತಾಳ**

ದಾಸರೆಂದರೆ ಪುರಂದರ ದಾಸರಯ್ಯ ॥ ಪ ॥
ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವಂಥ ॥ ಅ ॥ ಪ ॥
ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು
ದಾಸನೆಂದು ತುಲಸಿ ಮಾಲೆಗಳ ಧರಿಸಿ ॥
ಬೇಸರಿಲ್ಲದೆ ಅವರ ಬೇಡಿ ಬಳಲಿಸುತ
ಕಾಸುಗಳಿಸುವ ಪುರುಷ ಹರಿದಾಸನೇನೋ ॥ ೧ ॥
ಪಾತಕನ ತೆರನಂತೆ ಪದಗಳನೆ ತಾಪಾಡಿ
ಕೂಟ ಜನರ ಮನಸ್ಸಂತೋಷ ಪಡಿಸಿ ॥

ಗೂಟ ನಾಮವನಿಟ್ಟು ಕೋವಿದನು ತಾನೆನುತ
ಬೂಟಕೆಯ ಮಾಡಿದವ ಹರಿದಾಸನೇನೋ ॥ ೨ ॥
ದಂಭದಿಂ ಹರಿಸ್ಮರಣೆ ಮಾಡಿ ಜನರ ಮುಂದೆ
ಸಂಭ್ರಮದಿ ತಾನುಂಬ ಊಟಬಯಸಿ ॥
ಅಂಬುಜೋದ್ಭವ ಪಿತನ ಆಗಮಗಳರಿಯದೆ
ತಂಬೂರಿ ಮೀಟಿದವ ಹರಿದಾಸನೇನೋ ॥ ೩ ॥
ಯಾಯವಾರವ ಮಾಡಿ ವಿಪ್ರರಿಗೆ ವ್ಯಾಷ್ಟಾನ್ನ
ಪ್ರೀಯದಲಿ ತಾನೊಂದು ಕೊಡದಲೋಭಿ ॥
ಮಾಯ ಸಂಸಾರದಲಿ ಮಮತೆ ಹೆಚ್ಚಾಗಿಟ್ಟು
ಗಾಯನವ ಮಾಡಲವ ಹರಿದಾಸನೇನೋ ॥ ೪ ॥
ನೀತಿಯೆಲ್ಲವನರಿತು ನಿಗಮವೇದ್ಯನನಿತ್ಯ
ಮಾತುಮಾತಿಗೆ ಬಿಡದೆ ವರ್ಣಿಸುತಲಿ ॥
ಗೀತನರ್ತನದಿ ಶ್ರೀಕೃಷ್ಣನ್ನ ಪೂಜಿಸುವ
ಪೂತಾತ್ಮರಾದ ಪುರಂದರ ದಾಸರಯ್ಯ ॥ ೫ ॥

ಈ ಒಂದೇ ಒಂದು ಪದ್ಯದಿಂದ ಭಕ್ತ ಪುರಂದರ ದಾಸರ ದಿವ್ಯ ಘನತೆಯನ್ನು ಅರಿಯಬಹುದು.

## ಶ್ರೀ ಪುರಂದರ ದಾಸರ ಅವತಾರ ಪರಿಸಮಾಪ್ತಿಯು.

ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು ಯಃ ಸಮಾಮೇತಿ ಪಾಂಡವ ॥
ಗೀತಾ ॥ ೧೧—೫೫ ॥

ಈ ಶ್ಲೋಕದ ತಾತ್ಪರ್ಯವನ್ನು ಶ್ರೀಮತ್ಸತ್ಯಧ್ಯಾನತೀರ್ಥ ಶ್ರೀಪಾದಂಗಳವರು ಹೀಗೆ ಅಪ್ಪಣೆ ಕೊಡಿಸಿರುತ್ತಾರೆ—

"ಎಲೈ ಪಾರ್ಥನೆ! ಯಾವಾತನು ನನ್ನ ಪ್ರೀತ್ಯರ್ಥವಾದ ಕರ್ಮಗಳನ್ನು ಅನುಷ್ಠಾನ ಮಾಡುವವನಾಗಿ ನನ್ನನ್ನೇ (ಶ್ರೀಕೃಷ್ಣ

ನನ್ನೇ) ಸರ್ವೋತ್ತಮನೆಂದು ತಿಳಿದವನಾಗಿ, ನನ್ನಲ್ಲಿ ಭಕ್ತಿಯುಳ್ಳವನಾಗಿ, ವಿಷಯ ಸ್ನೇಹರಹಿತನಾಗಿ ಸರ್ವ ಸತ್ಪುರುಷರ ವಿಷಯದಲ್ಲಿಯೂ ದ್ವೇಷರಹಿತನಾಗಿರುವನೋ ಅಂಥವನು ನನ್ನನ್ನು ಹೊಂದುತ್ತಾನೆ."

ಶ್ರೀಕೃಷ್ಣನ ಉಪದೇಶದಂತೆ ತಮ್ಮ ಜೀವನ ಸರ್ವಸ್ವವನ್ನೂ ಶ್ರೀಹರಿ ಸೇವೆಗೆ ವಿನಿಯೋಗಿಸಿ ಶ್ರೀ ಪುರಂದರದಾಸರು ಶಾ। ಶ। ೧೪೮೬ ರಕ್ತಾಕ್ಷಿ ಸಂ। ಪುಷ್ಯ। ಬ। ೩೦ರಂದು ತಮ್ಮ ಪ್ರಾತರಾಹ್ನೀಕಗಳನ್ನು ತೀರಿಸಿ ಗುರುಗಳಾದ ವ್ಯಾಸರಾಯರನ್ನು—

**ರಾಗ ಕಾಂಭೋದಿ ಝಂಪೆ ತಾಳ**

ವಾಸುದೇವನ ಚರಣ ವನಜ ವಂದಿತನೆ ॥ ಪ ॥
ಸನ್ಯಾಸಿ ರತ್ನಾಕರನೆ ವ್ಯಾಸಮುನಿರಾಯ ॥ ಅ ॥ ಪ ॥
ವಾದಿಗಜಸಿಂಹ ದುರ್ವಾದಿಗಜಭೇರುಂಡ
ವಾದಿ ಫಣಿಗರುಡ ತತ್ವಾದಿರಚಿತ ॥
ವಾದಿ ಭಯಂಕರ ದುರ್ವಾದಿ ಕೋಲಾಹಲ
ವಾದಿಮಸ್ತಕಶೂಲ ಮಧುರಗುಣಶೀಲ ॥ ೧ ॥
ವೈಷ್ಣವೋತ್ತಮನೆ ಸದ್ವೈಷ್ಣವ ಪ್ರಜಾನಂದ
ವೈಷ್ಣವಾಗಮಭರಿತ ವೈಷ್ಣವ ಸುಪ್ರೀತ ॥
ವೈಷ್ಣವಾಚಾರ್ಯ ಸದ್ವೈಷ್ಣವ ಕುಮುದಚಂದ್ರ
ವೈಷ್ಣವ ಕುಲೋತ್ಕೃಷ್ಟ ವೈಷ್ಣವ ವಿಶಿಷ್ಟ ॥ ೨ ॥
ಹರಿಯಿಲ್ಲದ ಕ್ಷೇತ್ರ ವರಿಯದ ಮಹಾಮಹಿಮ
ಹರಿ ಶ್ರೀಕೃಷ್ಣ ಸರಸೀರುಹ ಭೃಂಗ ॥
ಗುರು ಪುರಂದರ ವಿಠಲನೆ ಪರದೈವವೆಂ
ದರುಹಿ ಸುಜನರ ಪೊರೆವ ವ್ಯಾಸಮುನಿರಾಯ ॥ ೩ ॥

ಎಂದು ತಮ್ಮಿಂದ ರಚಿತವಾದ ಸ್ತೋತ್ರವನ್ನು ಬಲುಬಾರಿ ಹೇಳಿಕೊಂಡರು. † ಅನಂತರ ವಿಜಯ ನಗರದ ವಿಜಯ ವಿಠಲನ ಗುಡಿಗೆ

† ಇಷ್ಟರಲ್ಲೇ ಶ್ರೀ ವ್ಯಾಸರಾಯರು ಹಂಪೆಯಲ್ಲೇ ಬೃಂದಾವನಸ್ಥರಾಗಿ ಕೆಲವು ವರ್ಷಗಳು ಕಳೆದು ಹೋಗಿರುವುದಾಗಿ ತಿಳಿದು ಬರುವುದು.

ಬಂದು ಪದ್ಮಾಸನಾಸೀನರಾಗಿ ಧ್ಯಾನಾಸಕ್ತರಾಗಿ ಕುಳಿತು ಲಯಚಿಂತನೆ ಮಾಡಿ ತಮ್ಮ ಜಠರಾಗ್ನಿಯೇ ಪ್ರಜ್ವಲಿಸಿ ತಮ್ಮ ದೇಹವನ್ನು ದಹಿಸು ವಂತೆ ಆತ್ಮ ಶಕ್ತಿಯಿಂದ ಸಾಧಿಸಿ ಪುರಂದರ ವಿಠಲನನ್ನು ಸ್ಮರಿಸುತ್ತಾ ತಮ್ಮ ಮೂಲರೂಪವನ್ನು ಸೇರಿದರು. ದಾಸರ ಮಕ್ಕಳು ಮಧ್ವಪತಿ ದಾಸರು ಈ ದೃಶ್ಯವನ್ನು ನೋಡುತ್ತಿದ್ದು—

ರಾಗ ಭೈರವಿ ಛಾಪುತಾಳ

**ತೆರಳಿದರು ಪುರಂದರ ದಾಸರಾಯರು ॥ ಪ ॥**
**ತೆರಳಿದರು ದುಂದುಭಿ ಮೊರೆಯಿಡುತಲಿರೆ**
**ಪುರಂದರ ದಾಸರು ನಿಜ ವೈಕುಂಠಕ್ಕೆ ॥ ಅ ॥ ಪ ॥**
ವಿದ್ಯಾ ನಗರದ ವಿಠ್ಠಲನ ಸನ್ನಿಧಿಯಲ್ಲಿ
ಹೊದ್ದಿದ್ದ ಭಾಗವತರ ಸಮ್ಮೇಳದಿ ॥ ೧ ॥
ವೈಕುಂಠಕೆ ಭೂಮಿಗೆ ಹರಿನಾಮದ
ಸೋಪಾನ ಮಾಡಿ ಭಕ್ತರಿಗೆ ಮಾರ್ಗವ ತೋರಿ ॥ ೨ ॥
ಅಚ್ಚಗನ್ನಿಕೆಯರಾರತಿಗಳ ನೆತ್ತಲು
ಅಚ್ಯುತ ಸಿದ್ದೆಡೆಗತಿಸಂಭ್ರಮದಿಂದ ॥ ೩ ॥
ರಕ್ತಾಕ್ಷಿ ಸಂವತ್ಸರದ ಪುಷ್ಯ ಬಹುಳ
ವತಿಶಯದಮಾವಾಸ್ಯ ಮಂದವಾರ ॥ ೪ ॥
**ಗುರುಮಧ್ವಪತಿ ವಿಠ್ಠಲನ ಧರೆಗೆ ತೋರಿ**
**ಪುರಂದರ ದಾಸರು ನಿಜ ವೈಕುಂಠಕ್ಕೆ ॥ ೫ ॥**

ಎಂಬುದಾಗಿ ದಾಸರು ಹರಿಪುರಕ್ಕೆ ತೆರಳಿದುದನ್ನು ಹಾಡಿರುವರು.

"**ಭಕ್ತ ಪುರಂದರ ದಾಸರು**" ಮಹಾಮಹಿಮಾನ್ವಿತರು. ಅವರ ಆರಾಧ್ಯ ಮೂರ್ತಿಯಾದ ಶ್ರೀ ಪುರಂದರ ವಿಠಲನ ಅನುಗ್ರಹವನ್ನು ಸರ್ವ ಸಜ್ಜನರೂ ಪಡೆಯಲು ಬಾಲಿಶಮತಿಯವನಾದ ನನ್ನಿಂದ ರಚಿತವಾದ ಈ ಸಂಕ್ಷಿಪ್ತ ಚರಿತ್ರೆಯು ಸಹಾಯಕವಾಗಲಿ ಅಲ್ಲದೆ ಪುರಂದರ ದಾಸರ ಪಾದಧೂಳಿಯ ಕಣವನ್ನು ಪ್ರೇಮದಿಂದ ಸ್ಪರ್ಶಿಸಿದವರ ವಂಶಜರ ಸಮಾ ಗಮವಾದರೂ ನನಗೆ ದೊರಕಿ ಯಾವ ಜನ್ಮದಲ್ಲೂ ಶ್ರೀ ಪುರಂದರ ದಾಸರು

ತೋರಿಕೊಟ್ಟ ಸನ್ಮಾರ್ಗದಲ್ಲಿ ನಾನು ಪ್ರವೃತ್ತನಾಗುವಂತೆಯೂ ಭಾರತೀ ರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಉಡುಪಿ ಶ್ರೀಕೃಷ್ಣನ ಅಡಿದಾವರೆ ಗಳಿಗಭಿವಂದಿಸಿ, 'ಪುರಂದರ ದಾಸರ ಪಾದಗಳಿಗೆ ನಮೋನಮಃ' ಎಂದು ಈ ಕೃತಿಯನ್ನು ಇಲ್ಲಿಗೆ ಮಂಗಳ ಮಾಡುವೆನು.

|| ಶ್ರೀಮಧ್ವೇಶಾರ್ಪಣಮಸ್ತು. ||



## ಈ ಗ್ರಂಥವೂ ದಾಸರ ಭಾಗ್ಯವೇ ನನ್ನದಲ್ಲ

**ರಾಗ ಮಾಯಾಮಾಳವ ಗೌಳ ಆದಿತಾಳ**

'ದಾಸರ ಭಾಗ್ಯವಿದು ಪುರಂದರ
ದಾಸರ ಭಾಗ್ಯವಿದು || ಪ ||

ದೇಶ ದೇಶದೊಳು ಸೂಸಿ ಹರಿಯುತಿದೆ || ಅ || ಪ ||

ಭೂಸುರ ಜನುಮದಿ ಬಂದು ಬೆಳೆದು ಉಪ
ದೇಶಗೊಂಡು ಮಧ್ವಮತ ಪೊಂದಿ ||
ಲೇಸಾಗಿ ಜ್ಞಾನ ಭಕ್ತಿ ವಿರಕ್ತಿ ವಿ
ಶೇಷವಾಗಿ ನಾ ಬಾಳುವುದಲ್ಲ || ೧ ||

ಸಜ್ಜನ ಸಂಗವಮಾಡಿ, ದುರುಳ ಜನ
ವರ್ಜನೆಗೈದು, ಸುಕರ್ಮಗಳ ||
ಆರ್ಜಿಸಿ, ನಾಮ ಮುದ್ರೆ ಹಗಲಿರುಳು ನಿ
ರ್ಲಜ್ಜನಾಗಿ ನಾ ಬಾಳುವುದಲ್ಲ || ೨ ||

ಶ್ರವಣ ಕೀರ್ತನೆ ವಂದನೆ ಸ್ತೋತ್ರ ಹರಿನಾಮ
ತವಕದಿಂದ ನುಡಿಯುವ ಕವನ ||
ನವನವ ವಚನವು ಮಂತ್ರ ಸಂಕಲ್ಪವು
ನವಿಮ ಸ್ಮರಿಸಿ ನಾ ಬಾಳುವುದಲ್ಲ || ೩ ||

ಯಾತ್ರೆ ತೀರ್ಥ ದಿವ್ಯ ದಾನಧರ್ಮಂಗಳು
ಕ್ಷೇತ್ರ ಮೆಟ್ಟಿ ಬಹ ಸಂಭ್ರಮವು ||
ಮಿತ್ರರಕೂಡಿ ಹರಿಪರನೆಂದು ಸ
ತ್ಪಾತ್ರನಾಗಿ ನಾ ಬಾಳುವುದೆಲ್ಲ || ೪ ||

ಹರಿದಿನದುಪವಾಸ ಜಾಗರಣೆ ಪಾರಣೆ
ಗುರುಹಿರಿಯರಲಿ ವಿಹಿತ ಸೇವೆ ||
ಓರಿದಾಗಿ ಮಾಡೋದು ಪರಿಪರಿಯಿಂದಲಿ
ಹರುಷದಿಂದಲಿ ನಲಿದಾಡುವುದೆಲ್ಲ || ೫ ||

ಷಡುರಸ ಭೋಜನ ದಿವ್ಯವಸನನಿತ್ಯ
ಉಡುವುದು ಹೊದೆವುದು ಹಸನಾಗಿ ||
ತಡೆಯದೆ ಜನರಿಂದ ಪೂಜೆಗೊಂಡುಸುಖ
ಬಡುತಿರುವ ವಿಚಿತ್ರಗಳೆಲ್ಲ || ೬ ||

ಮನವೆ ಓಗ್ಗದಿರು ಹಿಯ್ಯಾಳಿಕೆಯಿಂ
ಗಳಿಸಿಕೊ ಸುಖವಾವುದು ಲೇಶ ||
ನಿನಗೆ ಸ್ವತಂತ್ರ ಎಂಬುದ ಕಾಣೆನೆಂದಿಗು
ಗುಣನಿಧಿ ವಿಜಯ ವಿಠಲನ ಪ್ರೇರಣೆಯೆಲ್ಲ || ೭ ||

**ಶ್ರೀ ವಿಜಯ ದಾಸರು.**



## ಅರಿಕೆ—

ಈ ತನಕ ನಮ್ಮ ಮಾಲೆಗೆ ಧನಸಹಾಯವನ್ನು ಮಾಡಿ ಮುಂದೆ ವಿಶೇಷ ಸಹಾಯವನ್ನು ಮಾಡುವುದಾಗಿ ಭರವಸೆಯನ್ನಿತ್ತಿರುವ ಮಹಾಸೀ ಯರುಗಳೆಲ್ಲಾ ಈ ಮೊಗ್ಗೆಯು ಕರಗತವಾದೊಡನೆಯಾದರೂ ತಮ್ಮ ಭರ ವಸೆಯಂತೆ ಸಹಾಯವನ್ನು ಮಾಡಿದರೆ ಮುಂದಿನ ಮೊಗ್ಗೆಗಳು ಅರಳು ವುದಕ್ಕೆ ತುಂಬಾ ಉಪಕಾರವನ್ನು ಮಾಡಿದಂತಾಗಿ ಈ ದಾಸನಿಂದ ಕಿಂಚಿ ತ್ತಾದರೂ ಹರಿಗುರುಗಳ ಸೇವೆಯಾಗುವಂತಾಗುವುದು. ಅಲ್ಲದೆ ಧನ ವಂತರು ಸ್ವಲ್ಪಮಟ್ಟಿಗಾದರೂ ಔದಾರ್ಯವನ್ನು ತೋರಿದರೇನೇ ಇಂಥಾ ಗ್ರಂಥಗಳು ಕಂಡೆರೆದಾವು.

ಎಲ್ಲ ಅನುಕೂಲವಂತರಿಗೂ ಪುರಂದರ ವಿಠಲನೇ ಪ್ರೇರಣೆಯನ್ನು ಮಾಡಿ ನಮ್ಮ ಮಾಲೆಯು ಶೋಭಿಸುವಂತಾಗಲೆಂದು ಅವನಡಿದಾವರೆಗಳ ಹೊಂದಿಸುವೆನು.

ಮಾಲೆಯ ಅಧ್ಯಕ್ಷ.

---

## ನಮ್ಮ ಮಾಲೆಯಿಂದ ಈ ತನಕ ಪ್ರಕಟವಾಗಿರುವ ಪುಸ್ತಕಗಳು

| | |
|---|---|
| ಭಕ್ತ ಕನಕ ದಾಸರು† | 0--10—0 |
| ಭಕ್ತ ವಾದಿರಾಜರು† | 0—10—0 |
| ಭಕ್ತ ರಾಘವೇಂದ್ರರು | 0 10-- ) |
| ಸಮಯೋಚಿತ ಹರಿಭಜನ ಮಾಲಿಕಾ | 0- 3 -0 |
| ಶ್ರೀ ರಾಘವೇಂದ್ರ ಭಜನ ಮಾಲಿಕಾ | 0- 3- 0 |

ವಾರ್ಷಿಕ ಚಂದಾ ರೂ. 2—8- 0 ಮಾತ್ರ

(ಚಂದಾದಾರರಿಗೆ ನಿಯಮದಂತೆ ಕಳಿಸಲಾಗುವುದು)

†ಪ್ರತಿಗಳು ಮುಗಿದಿವೆ